# ಪರಿವಿಡಿ.



## — ಪರಿಶಿಷ್ಟಗಳು. —





# ಮೊದಲ ಮಾತು

ಈ ಪುಸ್ತಕವನ್ನು ನಾವು ಯಾಕೆ ಪ್ರಕಟಿಸಿದ್ದೇವೆ ಎಂಬುದಕ್ಕೆ ಕಾರಣವನ್ನು ಹೇಳುವ ಅಗತ್ಯ ಇಲ್ಲವೆಂದು ನಾವು ತಿಳಿದಿದ್ದೇವೆ. ಈಗ ವ್ಯಾಪಾರಸ್ಥರ ಮುಂದಿರುವ ಕಾಯದೆಯು ಅತ್ಯಂತ ಜಟಿಲವಾದದ್ದಿದ್ದು ಎಂಥ ಕಾನೂನಿನ ತಜ್ಞರಿಗೂ ಸುಲಭವಲ್ಲಿ ಅದರ ಒಳ ಅರ್ಥಗಳು ತಿಳಿಯುವಂತಿಲ್ಲ. ಇನ್ನು ವಿಶೇಷ ಕಲಿಯದ ವ್ಯಾಪಾರಸ್ಥರಿಗೆ ಕಾಯದೆಯ-ಸ್ಥೂಲವಲ್ಲ; ಸಂಪೂರ್ಣ ಪರಿಚಯ ಮತ್ತು ಪರಿಣಾಮಗಳು ತಿಳಿಯುವದು ಕಠಿಣವೇ ಆಗಿದೆ.

೧೯೫೩ರ ಬಹುಮುಖಿ ಕಾಯದೆಯು ಇನ್ನೆಲ್ಲ ರೀತಿಯಿಂದ ಸಮರ್ಪಕವಾಗಿದ್ದು, ಅದರಿಂದ ಸರಕಾರಕ್ಕೆ ಬೇಕಾದ ಹೆಚ್ಚಿನ ಕರವೇ ಬರಲಿಲ್ಲ. ಅಂತಾಗಿ ಆ ಕಾಯದೆಯ ಉಳಿದೆಲ್ಲ ಭಾಗವನ್ನು ಹಾಗೇ ಇಟ್ಟು, ಕೇವಲ ಕರಾಕರಣೆ ಅದಕ್ಕೆ ಸಂಬಂಧಪಟ್ಟ ಸವಲತ್ತು, ಲೈಸೆನ್ಸ್ ವ.ಎಂತಾದವುಗಳ ವಿಚಾರದಲ್ಲಿ ಮಾತ್ರ ತಿದ್ದುಪಡಿಗಳನ್ನು ಮಾಡಲಾಯಿತು.

ಅಂತೆಯೇ ನಾವು ಈ ಕರಾಕರಣೆಯನ್ನು ಮಾತ್ರ ಈ ಪುಸ್ತಕದಲ್ಲಿ ಹೆಚ್ಚಾಗಿ ವಿವೇಚಿಸಿದ್ದೇವೆ. ಅದೇ ಕಾಯಿದೆಯ ಜೀವದಂತಿದೆಯೆಂದರೂ ಅಡ್ಡಿಯಿಲ್ಲ. ಮೊದಲಿಗೆ ಹೊಸ ಕರಾಕರಣೆಯ ತತ್ವವಾದ ದ್ವಿಮುಖಿಯ ಪರಿಚಯವನ್ನು ಮಾಡಿಕೊಟ್ಟು ಹೊಸ ಕರಗಳನ್ನು ಯಾರು ಕೊಡಲಿಕ್ಕೆ ಪಾತ್ರರು ಎಂಬುದನ್ನು ವಿವರಿಸಿದ್ದೇವೆ. ನಂತರ, ಈ ಕರಗಳು ಎಲ್ಲೆಲ್ಲಿ ಮತ್ತು ಯಾವ ಬಗೆಯ ವ್ಯವಹಾರಗಳಲ್ಲಿ ಲಾಗೂ ಆಗುತ್ತವೆ ಎಂಬುದನ್ನೂ ಉದಾಹರಣೆಗಳಿಂದ ಚರ್ಚಿಸಲಾಗಿದೆ, ಹಾಗೆ ಮಾಡುವಾಗ ಸಂಬಂಧ ಪಟ್ಟ ಕಲಮು ಅಥವಾ ರೂಲ್ಸನ್ನು ಕಾಣಿಸಿದ್ದೇವೆ.

ಅದಕ್ಕಿಂತ ಈ ಪುಸ್ತಕದ ವೈಶಿಷ್ಟ್ಯವೆಂದರೆ ಆಯಾ ವ್ಯಾಪಾರೀ ವರ್ಗದ ಹಿತಸಂಬಂಧಗಳನ್ನು ಈ ಕಲಮುಗಳನ್ವಯ ವಿಶಿಷ್ಟವಾಗಿ ಹೇಳಿದ್ದೇವೆ. ಅಂದರೆ ದ್ವಿಮುಖಿಯ ಪರಿಣಾಮವು ಪ್ರತಿಯೊಂದು ವರ್ಗದ ಮೇಲೆ ಯಾವ ರೀತಿ ಆಗಬಹುದು ಎಂಬದರ ಸಂಕ್ಷಿಪ್ತ ವಿವರಣೆಯಾಗಿದೆ. ಇವು ಹೀಗಿ

ಸ್ವರೂ ವ್ಯಾಪಾರೀ ವರ್ಗದವರಿಗೆ ಸಮಸ್ಯೆಯಾಗಿರುವ ಸ್ಟಾಕಿನ ವಿಚಾರ. ಲೆಕ್ಕಪತ್ರಗಳನ್ನು ಹೇಗಿಡಬೇಕು ಎಂಬುದಕ್ಕೂ ಸೂಚನೆಗಳನ್ನು ಮಾಡಿ ಅವರ ಅಡಚಣೆಗಳು ದೂರಾಗಬೇಕು. ಅಲ್ಲದೆ ಇಂದಿನ ವ್ಯವಹಾರದಲ್ಲಿ ಇತರ ಕಷ್ಟಗಳೂ ಸಾಕಷ್ಟಿರುವಾಗ, ಅವರಿಗೆ ಇದೂ ಒಂದು ಸಮಸ್ಯೆಯಾಗಿ ಕೂಡಬಾರದೆಂದು, ಈ ಪುಸ್ತಕದಲ್ಲಿ ವಿವಿಧ ಯತ್ನಗಳನ್ನು ಮಾಡಲಾಗಿದೆ. ಕೊನೆಗೆ ಅವರಿಗೆ ಅನುಕೂಲವಾಗಲೆಂದು, ಖರೀದಿ ಮತ್ತು ಮಾರಾಟಗಳ ರಜಿಸ್ಟರ ನಮೂನೆಯನ್ನೂ ಕೊಡಲಾಗಿದೆ.

ಹೀಗೆ ಈ ಪುಸ್ತಕವು ಕಾಯದೆಯ ಕಲಮುಗಳ ಭಾಷಾಂತರವಲ್ಲ. ಸಂಕ್ಷಿಪ್ತ ಕೈಪಿಡಿಯೂ ಅಲ್ಲ ಕರಾಕರಣೆಯ ಸಂಬಂಧದಲ್ಲಿ ವ್ಯಾಪಾರೀ ಬಾಂಧವರ ಸಂಕಷ್ಟಗಳನ್ನೂ, ಅವರ ಬೇಡಿಕೆಗಳನ್ನೂ ಮುಂದಿಟ್ಟುಕೊಂಡು ವ್ಯಾವಹಾರಿಕ ದೃಷ್ಟಿಯಿಂದ ಕರಾಕರಣೆಯ ಪರಿಚಯವನ್ನೂ ಮತ್ತು ಪರಿಣಾಮವನ್ನೂ ಇದರಲ್ಲಿ ವಿವೇಚಿಸಲಾಗಿದೆ.

ಈ ಪುಸ್ತಕದ ಖರಡನ್ನು ತಯಾರಿಸಿದನಂತರ ಸಂಬಂಧಪಟ್ಟ ಅಧಿಕಾರಿವ ಇತರ ಜನರ ಕಣ್ಣೆದುರಿಗೆ ಹಾಕಿ ವಿಸ್ತರಿಸಿ ಈ ಒಂದು ಮೂರ್ತಸ್ವರೂಪವನ್ನು ಕೊಡಲಾಗಿದೆ. ಅಲ್ಲದೆ ಸ್ಥಳಿಕರಾದ ಬಲ್ಲವರ ಕಣ್ಣಿಗೂ ಇದನ್ನು ಹಾಕಿ ಅಲ್ಲಲ್ಲಿ ಸರಿಪಡಿಸಿದ್ದೇವೆ. ಇದಕ್ಕಾಗಿಯೇ ಪುಸ್ತಕ ಪ್ರಕಟವಾಗುವದು ತಡವಾಯಿತೆನ್ನಬೇಕು. ಹೀಗೆ ಇದರಲ್ಲಿ ಹೇಳಿದ ಮಾತುಗಳಲ್ಲಿ ಎಲ್ಲಿಯೂ ದೋಷಗಳುಳಿಯಬಾರದಾಗಿ ಸರ್ವ ಪ್ರಯತ್ನಗಳನ್ನೂ ಮಾಡಲಾಗಿದೆಯೆಂದು ಭರವಸೆ ಕೊಡುತ್ತೇವೆ.

ಈ ಪುಸ್ತಕದಲ್ಲಿ ಕೇವಲ ಕರಾಕರಣೆಯ ವಿಚಾರವನ್ನು ಮಾತ್ರ ಹೇಳಿರುವದರಿಂದ ಇದು ಅಪೂರ್ಣವೇ. ಇನ್ನು ಇಡಿ ಕಾಯದೆಯ ಕೈಪಿಡಿಯನ್ನು ಕೊಡಬೇಕೆಂದು ನಮ್ಮ ವಿಚಾರವಿದೆ, ಈ ರೀತಿಯ ಉಪಯುಕ್ತ ಸಾಹಿತ್ಯದ ನಮ್ಮ ಕಾರ್ಯವನ್ನು ಎಲ್ಲರೂ ಪ್ರೋತ್ಸಾಹಿಸಬೇಕಾಗಿ ವಿನಂತಿಸುತ್ತೇವೆ.

ಗದಗ.
೨೩—೪—೫೪

*M. S. Hombali.*

# ಮುಂಬಯಿ ದ್ವಿಮುಖಿ ಮಾರಾಟ ಕರ



## ೧ನೇ ಪ್ರಕರಣ

### ದ್ವಿಮುಖಿಯ ಸ್ಥೂಲ ಪರಿಚಯ

೧೯೫೪ರ ಎಪ್ರಿಲ ೧ನೇ ತಾರೀಖಿನಿಂದ ಜಾರಿಯಲ್ಲಿ ಬಂದು ವ್ಯಾಪಾರೀ ವರ್ಗವನ್ನೆಲ್ಲ ವಿಶೇಷ ಗಲಿಬಿಲಿಯಲ್ಲಿ ಕೆಡವಿದ **ಮುಂಬಯಿ ಮಾರಾಟಕರ ಕಾಯದೆಯು** ದ್ವಿಮುಖಿ ಕರದ ಕಾಯದೆಯೆಂದು ಜನರಲ್ಲಿ ಹೆಸರು ಹೊಂದಿದೆ. ಸರಕಾರದವರು ಮಾತ್ರ ಅದಕ್ಕೆ **೧೯೫೩ರ ಮಾರಾಟ ಕರ (ತಿದ್ದುಪಡಿ) ಕಾಯದೆ** ಎಂದಿದ್ದಾರೆ. ಆದರೆ ಕಾಯದೆಯ ಜೀವದಂತೆ ಇರುವ ಕರಬಾಧ್ಯತೆ ಮತ್ತು ಆಕರಣೆಯಲ್ಲಿ ಅತಿ ಮುಖ್ಯ ಬದಲಾವಣೆಗಳನ್ನು ಮಾಡಿರುವದರಿಂದ ಇದೊಂದು ಹೊಸ ಕಾಯದೆಯೆಂದು ಹೇಳಬಹುದು. ಈ ಪುಸ್ತಕದ ಮಟ್ಟಿಗೆ ಇದನ್ನು ದ್ವಿಮುಖಿ ಕರದ ಕಾಯದೆ ಎಂದು ಕರೆಯಲಾಗಿದೆ. ಮತ್ತು ಕರಪಾತ್ರತೆ ಹಾಗೂ ಕರಾಕರಣೆಯ ರೀತಿ ಅದರಿಂದ ವ್ಯಾಪಾರೀ ವರ್ಗದ ಮೇಲಾಗುವ ಪರಿಣಾಮಗಳನ್ನೂ, ಹಿತಾಹಿತಗಳನ್ನೂ ವಿವೇಚಿಸುವುದು ಈ ಪುಸ್ತಕದ ಉದ್ದೇಶವಾಗಿದೆ.

ಕರ ವಸೂಲಿಯ ರೀತಿಯಿಂದ ಇದು ದ್ವಿಮುಖಿ ಕರಾಕರಣೆ ಎಂದು ಹೇಳಿದೆವು. ಏಕಮುಖಿ (೧೯೪೬ರ ಕಾಯದೆ), ಬಹುಮುಖಿ (೧೯೫೨ರ ಕಾಯದೆ) ಇವುಗಳನ್ನು ತಿಳಿದಿರುವ ನಮಗೆ, ಇವೆರಡೂ ಅಲ್ಲದ, ಇವೆರಡರ ಮಧ್ಯದ ಹಾದಿಯೇ ದ್ವಿಮುಖಿ ಎಂದು ಹೇಳಬೇಕು. ಯಾವುದೇ ಒಂದು ಸರಕಿನ ಮೊದಲಿನ ವ್ಯಾಪಾರ ಮತ್ತು ಕೊನೆಯ ವ್ಯಾಪಾರದ ಮೇಲೆ ಒಟ್ಟಿನಲ್ಲಿ ಕರವು ಬೀಳುವಂತೆ ಮಾಡಿದುದು ಇದರ ಸಾಮಾನ್ಯ ತತ್ವವಾಗಿದೆ.

ಮೊದಲನೇ ವ್ಯಾಪಾರದ ಮೇಲಿನ ಕರವನ್ನು 'ಸೇಲ್ಸಟ್ಯಾಕ್ಸ್' ರೂಪದಲ್ಲಿ ಕೊಡಬೇಕಾಗುವದು. ನಂತರದ ವಹಿವಾಟುಗಳಲ್ಲಿ ವಿಶೇಷ ಲೈಸೆನ್ಸ ಧಾರಣ ಮಾಡಿದವರು, ಅಥವಾ ನಂಬರದಾರರು ಪ್ರತ್ಯಕ್ಷವಾಗಿಯೋ, ಅಪ್ರತ್ಯಕ್ಷವಾಗಿಯೋ ಕರಮುಕ್ತತೆಯನ್ನು ಹೊಂದಿ ಕೊನೆಯಲ್ಲಿ ಒಬ್ಬ ನಂಬರದಾರನು, ಇನ್ನೊಂದು ಮುಖದ ಕರವೆಂದು 'ಜನರಲ್ ಸೇಲ್ಸ ಟ್ಯಾಕ್ಸ'ನ್ನು ಕೊಡುವನು. ಹೀಗೆ ಇದು ದ್ವಿಮುಖಿ. ಇವೆರಡೂ ಘಟ್ಟಗಳನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು, ಖರೀದಿಯ ಮೇಲೆ ಸರಕಾರಕ್ಕೋ, ಮಾರಾಟಗಾರನಿಗೋ ಕರವನ್ನು ಕೊಟ್ಟು, ಅವನ್ನು ಮರತು ಕೇಳುವ ಯೋಜನೆಯನ್ನು ಮಾಡಿದೆ. ಇವನ್ನು ಸಾಧಿಸಲು ಇತರ ಅನೇಕ ಬಂಧನಗಳನ್ನೂ ಹೆಣೆದು ಕರ ವಸೂಲಿಗೆ ಸಿದ್ಧವಾಗಿ ನಿಂತಿದೆ.

## ಕೆಲವು ಶಬ್ದಗಳ ಅರ್ಥವಿವರಣೆ.

ನಮ್ಮ ಮುಂದಿನ ವ್ಯವಹಾರದಲ್ಲಿಯ ಉಪಯೋಗಕ್ಕಾಗಿಯೂ, ಈ ಪುಸ್ತಕದ ವಾಚನಕ್ಕಾಗಿಯೂ ಮೊದಲು ಕೆಲವೊಂದು ಶಬ್ದಗಳ ಬಗ್ಗೆ ಸ್ಪಷ್ಟವಾದ ತಿಳುವಳಿಕೆ ಮತ್ತು ಅವುಗಳ ಅರ್ಥಭೇದಗಳನ್ನು ತಿಳಿದಿರಬೇಕು. ಕರ ಪಾತ್ರತೆಯ ಮುದ್ರೆಯನ್ನು ನಮ್ಮ ಹಣೆಯ ಮೇಲೆ ಮೂಡಿಸಿದಂತಿರುವ ದಾಖಲೆಗೆ '**ರಜಿಸ್ಟ್ರೇಶನ್ ಸರ್ಟಿಫಿಕೇಟ್**' ಎಂದು ಹೆಸರು. ಹೀಗೆ ನೊಂದಾಯಿಸಲ್ಪಟ್ಟ ವ್ಯಾಪಾರಸ್ಥನನ್ನು ನಂಬರದಾರ ಎಂದು ಈ ಪುಸ್ತಕದಲ್ಲಿ ಮುಂದೆ ಹೇಳಲಾಗುತ್ತದೆ.

**ಲೈಸೆನ್ಸ.** ಈ ಲೈಸೆನ್ಸಿಗೂ, ಮೇಲೆ ಹೇಳಿದ ಸರ್ಟಿಫಿಕೇಟಿಗೂ ಅಂತರವಿದ್ದರೂ ರೂಢಿಯಲ್ಲಿ ನಂಬರದಾರನಿಗೂ ಲೈಸೆನ್ಸದಾರ ಅಂದು ಬಿಡುತ್ತೇವೆ, ಅದು ತಪ್ಪು. ಲೈಸೆನ್ಸ ಇದು ಹೊಸ ಕಾಯದೆಯಲ್ಲಿ ಕೆಲವೇ ನಂಬರದಾರರಿಗೆ ದೊರೆಯುತ್ತದೆ. ಲೈಸೆನ್ಸ ಇದು, ಅರ್ಜಿ ಮಾಡಿಕೊಂಡಲ್ಲಿ, ಠೋಕ ವ್ಯಾಪಾರಸ್ಥರಿಗೆ ಸಿಗುವದು. ಹೀಗೆ ಲೈಸೆನ್ಸದಾರ ಬೇರೆ, ನಂಬರದಾರನು ಬೇರೆ.

'**ಆಥರಾಯಿಜೇಶನ್**' ಎಂಬುದೂ ಅದರಂತೆಯೇ. ಬಹುಮುಖೀ ಕಾಲದ ಆಥರಾಯಿಜೇಶನ್ನಿಗೂ ಇದಕ್ಕೂ ಸಹಿತ ಅಂತರವಿದೆ. ಹೊಸ

ಕಾಯದೆಯ ಪ್ರಕಾರ ಪರಪ್ರಾಂತಕ್ಕೆ ದೊಡ್ಡ ಪ್ರಮಾಣದಲ್ಲಿ ಮಾಲನ್ನು ಕಳಿಸುವವರಿಗೆ ಇದು ದೊರೆಯುವದು. ಇದಲ್ಲದೆ ಬೇರೆ ವಿಶಿಷ್ಟ ವ್ಯಾಪಾರೀ ವರ್ಗಕ್ಕೆ **'ರಿಕಾಗ್ನಿಶನ್'** ಎಂಬ ಮಾನ್ಯತಾ ಸರ್ಟಿಫಿಕೇಟ ದೊರೆಯುವದು. ಉದಾಹರಣೆಯೆಂದು ಖಾದೀ ಮಾರಾಟದಾರರಿಗೆ, ಗಾಣಿಗರಿಗೆ ಇಂಥ ಮಾನ್ಯತಾಪತ್ರವು ಲಭ್ಯವಾಗುವದು.

ಕರದ ವಿಚಾರದಲ್ಲಿಯೂ ಹೀಗೆಯೇ ನಮೂನೆಗಳಿವೆ. ಬರೀ ಕರ ವೆಂದು ಉಪಯೋಗಿಸಿದರೆ, ಅರ್ಥವಾಗುವದಿಲ್ಲ. ಅಥವಾ ವಿಕ್ರಿ ಕರವೆಂದು ಒಟ್ಟೀ ಸ್ಥೂಲವಾಗಿ ಬಳಸಿದರೂ ತಪ್ಪಾಗುತ್ತದೆ. ಯಾಕಂದರೆ ಅದಕ್ಕೂ ಬೇರೆ ಒಂದು ವಿಶಿಷ್ಟ ಅರ್ಥವಿದೆ. ಅವನ್ನೀಗ ನೋಡೋಣ.

ಮೊದಲಿಗೆ ಸೇಲ್ಸ-ಟ್ಯಾಕ್ಸ. ಅಂದರೆ **ಮಾರಾಟಕರ,** ಮೊದಲನೇ ಕರ ಅಥವಾ ಒಂದು ಬಿಲ್ಲಿಯ ಕರವೆನ್ನಬಹುದು 'ಜನರಲ್ ಸೇಲ್ಸಟ್ಯಾಕ್ಸ' ಎಂಬುದು ಇನ್ನೊಂದು. ಇದಕ್ಕೆ **ಸಾಮಾನ್ಯ ವಿಕ್ರಿ ಕರ** ಇಲ್ಲವೆ ಅರ್ಧಆಣೆಯ ಕರವೆಂದು ಹೇಳಲಡ್ಡಿಯಿಲ್ಲ. 'ಪರ್ಚೇಜ ಟ್ಯಾಕ್ಸ' ಎಂದರೆ **ಖರೀದಿಕರ** ಮತ್ತೊಂದು; ನಮ್ಮ ಕೆಲವು ಖರೀದಿಯ ಮೇಲೆ ಸರಕಾರಕ್ಕೆ ತುಂಬಬೇಕಾ ದಂತಹದು. ನಮ್ಮ ಖರೀದಿಯ ಮೇಲೆ ನಾವು ಆ ಮಾರಾಟಗಾರರಿಗೆ ಕೊಡುವ ಖರೀದಿ ಕರವೆಂದು ಇದನ್ನು ತಿಳಿಯಬಾರದು. ನಾಲ್ಕನೆಯದಾಗಿ 'ಪರರಾಜ್ಯ ಖರೀದಿ ಕರ' ವೆಂದು ಕೆಲವೇ ನಾಮಾನುಗಳ ಮೇಲೆ ಬೀಳು ವಂತಹ ಕರವೊಂದಿದೆ.

## ಸ್ಥೂಲ ಪರಿಚಯ.

ಕಾಯದೆಯ ಸ್ಥೂಲ ಪರಿಚಯವನ್ನು ಮೊದಲಿಗೆ ಮಾಡಿಕೊಳ್ಳೋಣ.

ಇಡೀ ವ್ಯಾಪಾರೀ ಸಮುದಾಯವನ್ನು ಸರಕಾರವು ಮೂರು ವರ್ಗ ಗಳನ್ನಾಗಿ ಮಾಡಿದೆ. ೧. ಮಾಲನ್ನು ಕೊಂಡು ಪುನಃ ಇದ್ದಕ್ಕಿದ್ದಂತೆ ಮಾರಾಟ ಮಾಡುವವರು. ೨. ಪರರಾಜ್ಯದಿಂದ ತರಿಸಿ ಇಲ್ಲಿ ಮಾರಾಟ ಮಾಡುವ ಆಯಾತಗಾರರು. ೩. ಕಚ್ಚಾ ಮಾಲನ್ನು ಕೊಂಡು ಬೇರೊಂದು ಸರಕನ್ನು ಸಿದ್ಧಪಡಿಸಿ ಮಾರಾಟ ಮಾಡುವ ಉತ್ಪಾದಕರು.

ಮೊದಲನೇ ಗುಂಪಿನವರ ವಾರ್ಷಿಕ ವಿಕ್ರಿ ಅಥವಾ ಖರೀದಿಯು ರೂ. ೨೫,೦೦೦ ಕ್ಕಿಂತ ಹೆಚ್ಚಾಗಿದ್ದರೆ ಅವರು ಆ ದಿನದಿಂದ ಕರವನ್ನು ಕೊಡಬೇಕಾಗುತ್ತದೆ. ಇನ್ನೆರಡು ವರ್ಗದವರ ವಾರ್ಷಿಕ ಮಾರಾಟ ಅಥವಾ ಖರೀದಿಯು, ಕರ ಕೊಡುವ ಉದ್ದೇಶಕ್ಕಾಗಿ ರೂ. ೧೦,೦೦೦ ವಾದರೂ ಆಗಿರಬೇಕು.

ಅಲ್ಲಿಂದ ಅರ್ಜಿಮಾಡಿ ನೋಂದಾಯಿಸಿಕೊಂಡು ನಂಬರದಾರನಾಗುವನು ಮತ್ತು ತನ್ನ ಬಿನ್ ನಂಬರದಾರ ಖರೀದಿಯ ಮೇಲೆ ಖರೀದಿ ಕರವನ್ನೂ, ಮಾರಾಟದ ಮೇಲೆ ವಿಕ್ರಿ ಕರವನ್ನೂ, ಸಾಮಾನ್ಯ ಕರವನ್ನೂ ಕೊಡಬೇಕಾಗುವದೆಂದು ಸಾಮಾನ್ಯವಾಗಿ ತಿಳಿಯಬೇಕು.

ನಂಬರದಾರರ ಕಡೆಯಿಂದ ತನ್ನ ಮಾಲನ್ನು ಖರೀದಿ ಮಾಡಿದ್ದರೆ ಅಥವಾ ಖರೀದಿ ಕರ ಕೊಟ್ಟಿದ್ದರೆ ಅವನು ಮೊದಲನೇ ಕರವನ್ನು ಕೊಡಬೇಕಾಗಿಲ್ಲ. ಇನ್ನು ಸಾಮಾನ್ಯ ಕರವನ್ನು ಸಾಮಾನ್ಯವಾಗಿ ಎಲ್ಲ ಪ್ರಸಂಗದಲ್ಲಿ ಕೊಡಬೇಕಾದರೂ, ಬಹು ದೊಡ್ಡ ರೋಕ ವ್ಯಾಪಾರಸ್ಥನಾಗಿ ಲೈಸೆನ್ಸ ಪಡೆದವರಿದ್ದು ಅವರಿಗೆ ಮಾರಾಟ ಮಾಡಿದಲ್ಲಿ ಈ ಎರಡನೇ ಕರವನ್ನು ಕೊಡುವದು ಬೀಳುವದಿಲ್ಲ.

ಇದನ್ನೇ ಹೊರಳಿಸಿ ನೋಡಿದರೆ ಲೈಸೆನ್ಸದಾರರನ್ನು ಬಿಟ್ಟು ನಂಬರದಾರರಿದ್ದರೂ ನಾವು ನಮ್ಮ ಖರೀದಿಯ ಮೇಲೆ ಸಾಮಾನ್ಯ ಕರವನ್ನು ಕೊಡಬೇಕೆಂದಾಯಿತಲ್ಲ? ಹೌದು. ಆದರೆ ಹಾಗೆ ಕೊಟ್ಟಿದ್ದನ್ನು, ನಾವು ವಿಕ್ರಿ ಮಾಡಿದ ಮೇಲೆ ತುಂಬಬೇಕಾದಲ್ಲಿ ಕಳೆದು ಉಳಿದಿದ್ದರ ಮೇಲೆ ಕರವನ್ನು ತುಂಬಿದರಾಯಿತು. ಅಂದರೆ ಮೊದಲು ಕರವನ್ನು ಕೊಡಬೇಕು. ಆಮೇಲೆ ಪರತು ಕೇಳಬೇಕು. ಆದರಂತೆ ಯಾವದೇ ಸರಕನ್ನು ತಯಾರಿಸುವದರಲ್ಲಿ ವಿನಿಯೋಗಿಸಿದ ಕಚ್ಚಾ ಮಾಲಿನ ಖರೀದಿಯ ಮೇಲೂ ಯಾವದೇ ಕರವನ್ನು ಕೊಟ್ಟದ್ದಿದ್ದರೆ ಮೇಲಿನಂತೆ ವಜಾ ಹಾಕಿ ಉಳಿದ ಹಣವನ್ನು ತುಂಬಬೇಕೆನ್ನುವ ಯೋಜನೆ ಇದೆ.

ಇದು ಕರ ಯೋಜನೆಯ ಸ್ಥೂಲ ರೇಖೆಯಾಗಿದೆ. ಇನ್ನು ಇದರ ಲಕ್ಷಣಗಳನ್ನು ನೋಡೋಣ.

## ಲಕ್ಷಣಗಳು

೧. ಇವರಲ್ಲಿ ಅತಿ ಮುಖ್ಯವಾದದ್ದೆಂದರೆ **ಖರೀದಿ ಕರವು.** ಯಾವದೇ ಮಾರಾಟದ ಮೇಲೆ ತಪ್ಪದೇ ಕರವಸೂಲಿಯಾಗಬೇಕಾದರೆ ಅದರ ಖರೀದಿಯ ಮೇಲೂ ಒಂದು ಕಣ್ಣನ್ನು ಇಟ್ಟಿರಬೇಕು ಎಂದೋ ಏನೊ, ಈ ಹೊಸ ಕರದ ಬಗೆಯನ್ನು ಹೇಳಲಾಗಿದೆ. ಅದೂ ಎಲ್ಲ ಖರೀದಿಯ ಮೇಲೆ ಇದನ್ನು ಕೊಡುವದಿಲ್ಲ. ಬಿನ್ ನಂಬರದಾರರಿಂದ ಮಾಲನ್ನು ಖರೀದಿ ಮಾಡಿದ್ದರೆ ಈ ಕರದ ಹೊರೆ ಬೀಳುತ್ತದೆ.

೨. ಯಾವದಾದರೂ ಒಂದು ವ್ಯವಹಾರವಾದೊಡನೆಯೇ ಅದಕ್ಕೆ ತಕ್ಷಣ ಎರಡು ಕರಗಳು ಲಾಗೂ ಆಗುವವು. ಖರೀದಿ ಕರ ಮತ್ತು ಸಾಮಾನ್ಯ ಕರ. ಇಲ್ಲವೆ ಮೊದಲನೇ ಕರ ಮತ್ತು ಸಾಮಾನ್ಯಕರ ಇವುಗಳಲ್ಲಿ ಮತ್ತೆ ವಿಶೇಷ ಸಂದರ್ಭದಲ್ಲಿ ಅಪವಾದಗಳಿವೆಯೆನ್ನುವುದು ಈಗಾಗಲೇ ಸೂಚಿಸಿದ್ದಿದೆ.

೩ ಟ್ಯಾಕ್ಸ ಬೀಳುವ ಎಲ್ಲ ಸರಕುಗಳನ್ನು 'ಬಿ' ಕೋಷ್ಟಕದಲ್ಲಿ ಕೊಡಲಾಗಿದ್ದು, ಅದರಲ್ಲಿ ವಿಧ ವಿಧವಾದ ದರಗಳಿರುವದರಿಂದ, ಧಾರಣಿ ಜಂತ್ರಿಯಂತೆ ಆ ಕೋಷ್ಟಕವನ್ನು ಯಾವಾಗಲೂ ಬಳಿಯಲ್ಲಿ ಇಟ್ಟುಕೊಳ್ಳುವಂತಹ ಸ್ಥಿತಿ ಇದೆ.

೪. ಸಂಪೂರ್ಣ ಕರಮುಕ್ತ ಸರಕಿನ ಪಟ್ಟಿ ಮೊದಲು ('ಎ' ಕೋಷ್ಟಕ) ಇದ್ದಂತೆಯೇ ಇದ್ದು ಅಡಿಕೆ, ಕಡ್ಡಿಪೆಟ್ಟಿಗೆಗಳ ಮೇಲೆ ಹೊಸತಾಗಿ ಕರ ಹೇರಲಾಗಿದೆ. ಕಬ್ಬು, ಕೈಯಿಂದ ಮಾಡಿದ ಕಾಗದ ಇವುಗಳನ್ನು ಕರಮುಕ್ತ ಪಟ್ಟಿಯಲ್ಲಿ ಸೇರಿಸಲಾಗಿದೆ.

೫. ಪರಪ್ರಾಂತಕ್ಕೆ ಕಳಿಸುವ, ತರಿಸುವ ಈ ಬಗೆಯ ವ್ಯವಹಾರಸ್ಥರಿಗೆ ಮೊದಲಿಗಿಂತ ತುಸು ಹೆಚ್ಚಿನ ಸವಲತ್ತುಗಳು ದೊರೆತಿವೆ.

೬, ಖರೀದಿ ಕಾಲಕ್ಕೆ ಕೊಟ್ಟ ಕರಗಳ ರಿಫಂಡ್ ಇದೆಯಷ್ಟೆ. ಅದಕ್ಕಾಗಿ ಅಧಿಕಾರಿಗಳ ಹುಕುಮಿನ ದಾರಿ ಕಾಯದೇ, ನಮ್ಮ ಮೂರು ತಿಂಗಳ ಹಣದ ಲೆಕ್ಕದಲ್ಲಿ ನಾವೇ ವಜಾ ತೆಗೆದುಕೊಳ್ಳಬಹುದು.

೭. ಇನ್ನು ನಾವು ತುಂಬಬೇಕಾದ ರಕಮನ್ನು ತುಂಬುವದರಲ್ಲಿ ತಡವಾದರೆ ಈ ಹಿಂದೆ ಶೇಕಡ ೯ ರಂತೆ ದಂಡ ರೂಪದ ಬಡ್ಡಿಯನ್ನು ಕೊಡಬೇಕಾಗುತ್ತಿತ್ತಷ್ಟೆ. ಈಗ ಅದನ್ನು ಮೊದಲ ಮೂರು ತಿಂಗಳ ತಡವಾದರೆ ಶೇಕಡ ೧೨ರಂತೆಯೂ, (ವಾರ್ಷಿಕ) ಅನಂತರದ ತಡವಾಗುವಿಕೆಗೆ ಶೇಕಡ ೨೪ ರಂತೆಯೂ (ವಾರ್ಷಿಕ) ದಂಡವನ್ನು ಏರಿಸಲಾಗಿದೆ.

೮ ಕಿರುಕಳ ವ್ಯಾಪಾರಸ್ಥರಿಗೆ ಗುತ್ತಿಗೆ ರೂಪದಲ್ಲಿ ಸಾಮಾನ್ಯ ಕರವನ್ನು ಕೊಡುವ ಸುಲಭಗೊಳಿಸಿದ ಪದ್ಧತಿಯನ್ನು ಇಡಲಾಗಿದೆ.

---

# ೨ನೇ ಪ್ರಕರಣ

## ಕರ ಪಾತ್ರತೆ ಮತ್ತು ಕರಗಳು

ಈ ದ್ವಿಮುಖಿ ಕಾಯದೆಯನ್ವಯ ಕರವನ್ನು ಕೊಡಲಿಕ್ಕೆ ಯಾರು ಪಾತ್ರರಾಗುವರೆಂಬುದನ್ನು ಈ ಕೆಳಗೆ ವಿವರಿಸಲಾಗಿದೆ.

ಬಹುಮುಖೀ ಆಡಳಿತೆಯಲ್ಲಿ ಯಾರ ಒಂದು ವರ್ಷದ ಮಾರಾಟವು ರೂ. ೩೦,೦೦೦ ಕ್ಕಿಂತ ಹೆಚ್ಚಿಗೆ ಇರುತ್ತಿತ್ತೋ ಅವರೆಲ್ಲರೂ ಕರಪಾತ್ರರಾಗುತ್ತಿದ್ದು, ನೋಂದಾಯಿಸಿಕೊಳ್ಳಬೇಕಾಗುತ್ತಿತ್ತು. ತಿದ್ದುಪಡೆ ಕಾಯ್ದೆಯಲ್ಲಿ ಎರಡು ಮಹತ್ವದ ಬದಲಾವಣೆಗಳನ್ನು ಮಾಡಲಾಗಿದೆ. ಒಂದು, ಕೇವಲ ಮಾರಾಟವಲ್ಲದೆ ಖರೀದಿಯನ್ನೂ ಕರಪಾತ್ರತೆಯ ದೃಷ್ಟಿಯಿಂದ ಲೆಕ್ಕಕ್ಕೆ ತೆಗೆದುಕೊಳ್ಳಲಾಗಿದೆ. ಇನ್ನೊಂದು, ಇಡೀ ವ್ಯಾಪಾರೀ ವರ್ಗವನ್ನು ಪುನಃ ಮಾರಾಟಗಾರರು ಎಂದೂ, ಉತ್ಪಾದಕರು ಮತ್ತು ಆಯಾತಗಾರರು ಎಂದೂ ತಿಳಿಯಲಾಗಿದೆ.

### ಇಪ್ಪತ್ತೈದು ಸಾವಿರದವರು

ಆದರ ಪ್ರಕಾರ ಯಾವದೇ ವ್ಯಾಪಾರಸ್ಥನ ಒಟ್ಟು ಒಂದು ವರ್ಷದ ಮಾರಾಟ ಇಲ್ಲವೆ ಖರೀದಿ ಇವೆರಡರಲ್ಲಿ ಯಾವದಾದರೂ ಒಂದು,

ರೂ ೨೫,೦೦೦ಗಳನ್ನು ಮೀರಿದ್ದರೆ ಅವರು ಕರಪಾತ್ರರಾಗುತ್ತಾರೆ. [ ಸೆ. ೫ (೧) (iii) ] ಇದರಿಂದ ಬಹುಮುಖೀ ಕಾಲದಲ್ಲಿದ್ದ ಪರಿಮಿತಿಯನ್ನು ಐದು ಸಾವಿರದಿಂದ ಇಳಿಸಲಾಯಿತು.

ಖರೀದಿಯನ್ನೂ ಲೆಕ್ಕಕ್ಕೆ ಹಿಡಿದದ್ದರ ಪರಿಣಾಮವೇನೆಂದರೆ, ಒಬ್ಬನ ಒಂದು ವರ್ಷದ ಮಾರಾಟವು ೨೧,೦೦೦ ರೂ. ಗಳಷ್ಟಾಗಿದ್ದು. ಅದೇ ದಿನಕ್ಕೆ ೨೫,೦೦೦ ರೂ. ಗಳ ಖರೀದಿ ಇದ್ದರೆ ಅವನು ಆ ದಿನದಿಂದಲೇ ಕರಪಾತ್ರನಾಗುತ್ತಾನೆ. ಮತ್ತು ಆ ದಿನದಂದಿನಿಂದ ಮಾಡಿದ ಖರೀದಿ ಮತ್ತು ಮಾರಾಟ ಇವೆರಡರ ಮೇಲೂ ಕರಕೊಡಲಿಕ್ಕೆ ಪಾತ್ರನಾಗುತ್ತಾನೆ.

## ಹತ್ತು ಸಾವಿರದವರು.

ಯಾರು ಮುಂಬಯಿ ರಾಜ್ಯವನ್ನು ಬಿಟ್ಟು ಹೊರಗಿನಿಂದ ಸರಕನ್ನು ಆಯಾತ ಮಾಡುತ್ತಾರೋ ಮತ್ತು ಯಾರು ಕಚ್ಚಾ ಸಾಮಗ್ರಿಯನ್ನು ಕೊಂಡು ಬೇರೆ ಸರಕನ್ನು ತಯಾರಿಸುತ್ತಾರೆಯೋ, ಅಂಥವರ ಒಟ್ಟಿನ ಮಾರಾಟವಾಗಲೀ, ಖರೀದಿಯಾಗಲೀ ಒಂದು ವರ್ಷದಲ್ಲಿ ರೂ. ೧೦,೦೦೦ ಮಿಕ್ಕಿದ್ದರೆ ನಾಕು, ಅವರು ಕರ ಪಾತ್ರರಾಗುತ್ತಾರೆ

ಇದಕ್ಕೊಂದು ಮಹತ್ವದ ಕರಾರು ಇದೆ. ತೀರ ಅಲ್ಪ ಪ್ರಮಾಣದಲ್ಲಿ ಆಯಾತ ಮಾಡುವವರಿಗೂ, ಅಷ್ಟೇ ಕಡಿಮೆಯಾಗಿ ಸರಕನ್ನು ತಯಾರಿಸುವವರಿಗೂ ಈ ಹತ್ತು ಸಾವಿರದ ಗೆರೆಯು ಇಲ್ಲ ಅಂಥವರನ್ನು ಆಯಾತಗಾರ ಅಥವಾ ಉತ್ಪಾದಕ ಎಂದು ಗಣಿಸಲಾಗುವದಿಲ್ಲ. ಹಾಗಿದ್ದರೆ ಇದನ್ನು ತಿಳಿಯುವದೆಂತು? ಇದಕ್ಕಿರುವ ನಿಯಮವೆಂದರೆ, ಆ ವರ್ಷದಲ್ಲಿ ಈ ರೀತಿ ಹೊರಗಿನಿಂದ ತರಿಸಿದ ಮಾಲಿನ, ಇಲ್ಲವೆ ಉತ್ಪಾದಿಸಲಾದ ಸರಕಿನ ಕಿಮ್ಮತ್ತು ಕನಿಷ್ಠ ರೂ. ೨೫೦೦ ರಷ್ಟಾದರೂ ಇರಬೇಕು, [ ಸೆ. ೫ (೧) (i). ಮತ್ತು ( ii ) ].

ಹೀಗೆ ಯಾರೊಬ್ಬರ ಪರರಾಜ್ಯ ಖರೀದಿಯು, ೩೦೦೦ ರೂ. ಇದ್ದು, ಅವರ ಎಲ್ಲ ಮಾಲಿನ ಒಟ್ಟು ವ್ಯಾಪಾರವು ಆ ಅವಧಿಗೆ ೯೫೦೦ ರೂ. ಆಗಿದ್ದರೆ ಅವರು ಕರ ಪಾತ್ರರಾಗುವದಿಲ್ಲ. ಆದರಂತೆ ಒಬ್ಬನು ಹೊಸದಾಗಿ ಫ್ಯಾಕ್ಟರಿ

ಬೀಜವನ್ನು ತೆಗೆದು, ೨೦೦೦ ರೂ.ಗಳಷ್ಟು ಬೆಲೆಯಾಗುವ ಸರಕನ್ನು ಸಿದ್ಧ ಪಡಿಸಿ ಅದರ ಮತ್ತು ಇತರ ಬೇರೆ ಸರಕಿನ ವ್ಯಾಪಾರವನ್ನು ಆ ವರ್ಷಕ್ಕೆ ಸುಮಾರು ಒಂಬತ್ತು ಸಾವಿರದಷ್ಟು ಮಾಡಿದನೆಂದು ತಿಳಿಯುವಾ. ಅವನೂ ಕರ ಪಾತ್ರನಾಗುವದಿಲ್ಲ.

‘ಉತ್ಪಾದಕ’ ಎಂಬ ಶಬ್ದವನ್ನು ಬಹಳ ವಿಶಾಲಾರ್ಥದಲ್ಲಿ ಬಳಸ ಲಾಗಿದೆಯೆಂಬುದನ್ನು ಮರೆಯಬಾರದು. ಯಾವದೇ ಸರಕನ್ನು ತಯಾರಿಸು ವವರು, ಬೆಳೆಯಿಸುವವರು, ಸಂಗ್ರಹಿಸುವವರು, ಪ್ರೊಸೆಸ್ ಮಾಡು ವವರು ಇವರೆಲ್ಲರೂ ಸಮಾವೇಶವಾಗುತ್ತಾರೆ. [ ಸೆ. ೫ (೧) (ii) ]

## ಕರ ಪಾತ್ರತೆಯು ಆರಂಭ.

ಎಪ್ರಿಲ್ ತಿಂಗಳದಿಂದ ಸುರುವಾಗಿ ೩೧ ಮಾರ್ಚಕ್ಕೆ ಮುಗಿಯುವ ೧೯೫೩-೫೪ನೆಯ ಸಾಲಿನಲ್ಲಿ ಯಾವದೇ ವ್ಯಾಪಾರಸ್ಥನ ಮಾರಾಟ ಇಲ್ಲವೆ ಖರೀದಿಯು ಮೇಲೆ ಹೇಳಿದ ಸಂಖ್ಯೆಗಳನ್ನು ಮೀರಿದ್ದರೆ, ೧೯೫೪ರ ಎಪ್ರಿಲ ತಿಂಗಳ ೧ನೇ ತಾರೀಖಿನಿಂದ ಕರಕೊಡಲು ಅವನು ಬಾಧ್ಯನಾಗುತ್ತಾನೆ.

ಅಥವಾ ಮುಂದೆ ಒಂದು ವರ್ಷದಲ್ಲಿ ಯಾವದೇ ಮಿತಿಗೆ ಗೊತ್ತು ಪಡಿಸಿದಷ್ಟು ವ್ಯವಹಾರವಾಯಿತೆಂದರೆ, ಆದರ ಮರುದಿನದಿಂದಲೇ ಅವನು ಕರಕೊಡಲು ಪಾತ್ರನಾಗುತ್ತಾನೆ.

ಇನ್ನು ನಮ್ಮಲ್ಲಿಯ ಅನೇಕರಿಗೆ ಈಗಾಗಲೇ ನೋಂದಣಿ ಸರ್ಟಿ ಫಿಕೇಟ ಇದೆ. ಅದು ಇದ್ದರೂ ಹೊಸಬರಂತೆ ನಾವು ಒಂದು ತಿಂಗಳೊಳ ಗಾಗಿ ಅರ್ಜಿಯನ್ನು ಕೊಟ್ಟು ಬೇರೊಂದು ಹೊಸ ಸರ್ಟಿಫಿಕೇಟನ್ನು ಪಡೆದು ಕೊಳ್ಳಬೇಕು. ಹಳೆಯ ಯಾವದೇ ನಂಬರ, ಲೈಸೆನ್ಸ್, ಅಥರಾಯಿಜೇಶನ್ ಇದ್ದಲ್ಲಿ ಕೂಡಲೇ ಪರತು ಮಾಡಬೇಕು ಎಂದು ಆಜ್ಞೆ ಮಾಡಲಾಗಿದೆ.

ಹಳಬರಿಗೆ ಇರುವ ಅನುಕೂಲವೆಂದರೆ, ಏನಾದರೂ ಕಾರಣದಿಂದ ಬೇಗ ಹೊಸ ಅರ್ಜಿ ಕೊಡುವುದಾಗದಿದ್ದರೆ, ಆದರಿಂದಾದ ಅಪರಾಧವೇನೇ ಇರಲಿ, ೧೯೫೪ರ ಜೂನ್ ೩೦ರ ವರೆಗೆ ನಾವು ಕಾಯದೇಶೀರ ನೋಂದಣಿ ದಾರರೆಂದು ಇತರ ಕೆಲಸಗಳಿಗಾಗಿ ಗ್ರಹಿಸಲಾಗುವದು. ಅದಕ್ಕೂ

ಮುಂಚಿಯೇ ಹೊಸ ನಂಬರನ್ನು ಪಡೆದುಕೊಂಡಲ್ಲಿ ಹಳೆಯದು ತಂತಾನೆ ರದ್ದಾಗುವದೆಂದು ಬೇರೆ ಹೇಳಬೇಕಾಗಿಲ್ಲ.

ಇನ್ನು ಕೆಲವರಿಗೆ ಹಳೆಯ ಅಂದರೆ ಬಹುಮುಖೀ ಕಾಲದ ಸರ್ಟಿಫಿಕೇಟ ಇದ್ದು, ಅವರ ವ್ಯಾಪಾರ ಕಡಿಮೆಯಾಗಿ, ಹೊಸ ಕಾಯದೆಯ ನಿಯಮದಂತೆ ಗೊತ್ತುಪಡಿಸಿದಷ್ಟು ವಿಕ್ರಿ ಖರೀದಿಗಳು ಆಗಿರದಿದ್ದರೆ ಅಂಥವರು ಕೂಡಲೇ ಅರ್ಜಿಯನ್ನು ಕೊಟ್ಟು ತಮ್ಮ ನಂಬರನ್ನೂ ತನ್ಮೂಲಕ ಕರ ಪಾತ್ರತೆಯನ್ನೂ ರದ್ದು ಮಾಡಿಸಿಕೊಳ್ಳಬೇಕಾಗುತ್ತದೆ.

## ಕರಗಳು

ದ್ವಿಮುಖಿ ಕಾಯದೆಯಲ್ಲಿ ಒಟ್ಟಿಗೆ ನಾಲ್ಕು ನಮೂನೆಯ ಕರಗಳಿದ್ದು, ಅವುಗಳಲ್ಲಿ ಒಂದೊಂದಕ್ಕೂ ಪ್ರತ್ಯೇಕವಾದ ಒಟ್ಟು ವ್ಯವಹಾರವನ್ನು ತ್ರೈಮಾಸಿಕ ರಿಟರ್ನಿನಲ್ಲಿ ಕೊಡಬೇಕಾಗುತ್ತದೆ. ( ಒಂದನ್ನು ಬಿಡಬೇಕು ). ಅವುಗಳನ್ನು ಬೇರೆ ಶಬ್ದಗಳಲ್ಲಿ ಈಗಾಗಲೇ ಹೇಳಿದೆ. ಇನ್ನು ಅವುಗಳ ಸ್ವರೂಪವನ್ನು ಇಲ್ಲಿ ಕೊಡಲಾಗಿದೆ.

೧. **ಮಾರಾಟ ಕರ—** ( Sales tax ) ಮುಂಚಿನ ಸ್ಪೆಶಲ್ ಟ್ಯಾಕ್ಸ ಇದ್ದ ಹಾಗೆ. ಇದನ್ನು ನಾವು **ಮೊದಲನೇ ಕರ** ಎಂದು ಕರೆದಿದ್ದೇವೆ.

೨. **ಸಾಮಾನ್ಯ ಮಾರಾಟಕರ—** (General Sales tax) ಮುಂಚಿನ ಜನರಲ್ ಟ್ಯಾಕ್ಸ ಇದ್ದ ಹಾಗೆ. ಇದನ್ನು ಸಾಮಾನ್ಯ ಕರವೆಂದು ಇಲ್ಲಿ ಕರೆದಿದೆ.

೩. **ಖರೀದಿ ಕರ—** (Purchage tax) ಇದು ಸಂಪೂರ್ಣ ಹೊಸತು.

೪. **ಪರರಾಜ್ಯ ಖರೀದಿ ಕರ—** ( outside purchage tax ) ಬಹುಮುಖೀ ಕಾಲದ ಖರೀದಿ ಕರವಿದ್ದಂತೆಯೇ ಇದು.

ಇವುಗಳಲ್ಲಿ ಕೊನೆಯ ಕರವು ಮೋಟರು ವಾಹನ, ಬಂದೂಕು ಇಂಥ ಕೆಲವೇ ಸಾಮಾನುಗಳಮೇಲೆ ಇರುವದರಿಂದ ಮತ್ತು ಬಿನ್ ನಂಬರದಾರ

ಹಾಗೂ ಇತರ ಗ್ರಾಹಕರಿಗೆ ಅನ್ವಯಿಸುವದರಿಂದ ಸಧ್ಯಕ್ಕೆ ವ್ಯಾಪಾರಸ್ಥರು ಈ ಕರದ ಬಗ್ಗೆ ಹೆಚ್ಚು ಯೋಚಿಸಬೇಕಾದದ್ದಿಲ್ಲ. [ಸೆ. ೧೦ ಕ. ೧]

ಹಾಗಾಗಿ ಮೂರು ಕರಗಳು ನಮ್ಮ ಮೇಲೆ ಉಳಿಯುವವಷ್ಟೆ. ಒಂದೊಂದಾಗಿ ನೋಡುವಾ ಮೊದಲು ಖರೀದಿ, ಅನಂತರ ವಿಕ್ರಿಯಷ್ಟೆ.

## ಖರೀದಿ ಕರ

ನಾವು ಬಿನ್ ನಂಬರದಾರರ ಕಡೆಯಿಂದ ಸರಕನ್ನು ಖರೀದಿ ಮಾಡಿ ದರೆ ಖರೀದಿ ಕರವನ್ನು ಆ ಮೂರು ತಿಂಗಳ ಅವಧಿಯಲ್ಲಿ ಸರಕಾರಕ್ಕೆ ಕೊಡ ಬೇಕಾಗುತ್ತದೆ. [ಸೆ. ೧೦(ಅ)] ಪರಪ್ರಾಂತದಿಂದ ಮಾಲು ತರಿಸಿದಲ್ಲಿ ಅದು ಹೆಚ್ಚಾಗಿ ಬಿನ್ ನಂಬರದಾರರ ಕಡೆಯಿಂದಲೇ ಇರುವದರಿಂದ ಅದರ ಮೇಲೆ ಖರೀದಿ ಕರವು ಬೀಳುತ್ತದೆ. ರೈತ, ಅತಿ ಸಣ್ಣ ಉದ್ದಿಮೆದಾರ ಇವರ ಕಡೆ ಯಿಂದ ಖರೀದಿ ಮಾಡಿದಾಗ್ಯೂ ಗೊತ್ತು ಪಡಿಸಿದಷ್ಟು ಖರೀದಿ ಕರವು ಇದ್ದೇ ಇದೆ.

ಪ್ರತಿ ಮೂರು ತಿಂಗಳಿಗೆ ನಮ್ಮ ಪತ್ರಕದಲ್ಲಿ ವಿಕ್ರಿಯಂತೆ ಖರೀದಿಯ ಒಟ್ಟು ವ್ಯವಹಾರವನ್ನು ತೋರಿಸಿ, ನಂಬರದಾರರಿಂದ ತಂದ ಖರೀದಿಯು ರಕಮನ್ನು ವಜಾ ಮಾಡಿ ಬಾಕಿಯುದರ ಮೇಲೆ ಖರೀದಿ ಕರವನ್ನು ಲೆಕ್ಕಕ್ಕೆ ಹಿಡಿಯಬೇಕಾಗುತ್ತದೆ.

ಇನ್ನೊಂದು ರೀತಿಯ ವ್ಯವಹಾರದ ಮೇಲೆ ಖರೀದಿ ಕರವು ಬೀಳುವು ದುಂಟು. ಅದೆಂದರೆ ಒಬ್ಬ ನಂಬರದಾರನು ಪರಪ್ರಾಂತಕ್ಕೆ ಕಳಿಸುತ್ತೇನೆಂದು ಹೇಳಿ ಆರು ತಿಂಗಳೊಳಗಾಗಿ ಹಾಗೇ ಕಳಿಸದೇ ಉಳಿಸಿಕೊಂಡರೆ, ಅಥವಾ ಮತ್ತಾವುದಕ್ಕಾದರೂ ಉಪಯೋಗಿಸಿಕೊಂಡರೆ ಅವನು ತಾನು ಖರೀದಿ ಮಾಡಿದ್ದರ ಮಾಲಿನ ಕಿಮ್ಮತ್ತಿನ ಮೇಲೆ ಖರೀದಿ ಕರವನ್ನು ಕೊಡಲೇ ಬೇಕು. [ಸೆ. ೧೦ (ಬ)]

ಬಿ ಕೋಷ್ಟಕದಲ್ಲಿ ೧-೧೮ ರ ವರೆಗಿನ ಸರಕುಗಳನ್ನು ಅಂದರೆ ಹತ್ತಿ, ನೂಲು, ಚರ್ಮ, ಎಣ್ಣೆಕಾಳು, ತಿನ್ನುವ ಎಣ್ಣೆ, ಕಬ್ಬಿಣ, ಕೋರ್ಸ ಮೊಡಿ ಯಮ್ ಅರಿವೆ ಮುಂತಾದ ಸರಕುಗಳನ್ನು ಬಿನ್ ನಂಬರದಾರರಿಂದ ಕೊಂಡು

ಒಟ್ಟು ಮುಂಬೈ ರಾಜ್ಯದಲ್ಲಿ ಮಾರಾಟ ಮಾಡಿ ಬಿಟ್ಟರೆ ಸಾಕು ಅವುಗಳ ಮೇಲೇನು ಖರೀದಿ ಕರವು ಬೀಳುವದಿಲ್ಲ. [ಸೆ. ೧೦. ಅಪವಾದ]. ಈ ಕಲಮಿನ ಪ್ರಕಾರ, ಕ್ರೈತನಿಂದ ಅಂದರೆ ಬಿನ್ ನಂಬರದಾರನಿಂದ ಎಣ್ಣೆಯ ಕಾಳನ್ನು ಕೊಂಡು ಅದನ್ನು ಮಾರಾಟ ಮಾಡಿಬಿಟ್ಟರೆ ಸಾಕು, ಖರೀದಿ ಕರವು ಇಲ್ಲ. ಅವನ್ನೇ ಯಾವದಾದರೂ ಎಣ್ಣೆ ತೆಗೆಯುವದಕ್ಕೆ ಉಪಯೋಗಿಸಿದಲ್ಲಿ ಅಥವಾ ಪರಪ್ರಾಂತಕ್ಕೆ ಕಳಿಸಿದಲ್ಲಿ ಖರೀದಿ ಕರವಿದೆ.

## ಮೊದಲನೇ ಕರ

ಬಿನ್ ನಂಬರದಾರರ ಕಡೆಯಿಂದ ಖರೀದಿ ಮಾಡಿದ, ಸ್ವಂತ ಉತ್ಪಾದಿಸಿದ, ಹೊರಗಿನಿಂದ ತರಿಸಿದ ಸರಕುಗಳ ವಿಕ್ರಿಯ ಮೇಲೆ ಈ ಕರವು ಬೀಳುತ್ತದೆ. ಅಂದರೆ ನಂಬರದಾರರಿಂದ ತಂದಿದ್ದ ಸರಕನ್ನು ಮಾರಾಟ ಮಾಡಿದಾಗ ಅದರ ಮಾರಾಟದ ಮೇಲೆ ಈ ಕರವು ಇಲ್ಲವೆಂಬುದನ್ನು ಲಕ್ಷ್ಯದಲ್ಲಿಡಬೇಕು [ಸೆ. ೮ (ಅ) (i)] ಇವರಿಂದ ಯಾವದೊಂದು ಸರಕಿನ ವ್ಯವಹಾರ ಮಾಲಿಕೆಯಲ್ಲಿ ಮೊದಲನೇ ಮಾರಾಟದ ಮೇಲೆ ಈ ಕರವು ಬೀಳುವದರಿಂದ ಇವಕ್ಕೆ ಮೊದಲನೇ ಕರವೆಂದು ಹೇಳಲಾಗಿದೆ.

ಕಚ್ಚಾ ಸಾಮಗ್ರಿಯಿಂದ ಬೇರೊಂದು ಸರಕನ್ನು ಸಿದ್ಧಗೊಳಿಸಿದಾಗ ಆ ಸಿದ್ಧ ಸರಕಿನ ಖರೀದಿಯೆಂಬುದೇ ಇರುವದಿಲ್ಲ. ಆದ್ದರಿಂದ ಉತ್ಪಾದಿಸಲಾದ ಅಥವಾ ತಯಾರಮಾಡಿದ ಮಾಲಿನ ಮೇಲೆ ತಪ್ಪದೇ ಈ ಕರವು ಬೀಳುವದು.

ಹೀಗೆ ಇದು ಆಚರಣೆಯಲ್ಲಿ ಬಹುಮುಖೀ ಪದ್ಧತಿಯಲ್ಲಿದ್ದ ಸ್ಪೆಶಲ್ ಟ್ಯಾಕ್ಸಗೆ ಸರಿಹೋಗುತ್ತದೆ ಇಷ್ಟೇ ಅಂತರ, ಅಲ್ಲಿ ಕೆಲವೇ ಸರಕುಗಳ ವಿಶಿಷ್ಟಕರವಿದ್ದರೆ, ಇಲ್ಲಿ ಎಲ್ಲ ಸರಕುಗಳ ಮೇಲೆ ಈ ಕರವಿದೆ. (೧-೧೮ರ ವರೆಗಿನವುಗಳನ್ನು ಬಿಟ್ಟು) ಹೆಚ್ಚಿನ ಸರಕುಗಳ ಮೇಲೆ ೦-೦-೩ ಇದೆ. ಐಷಾರಾಮೀವಸ್ತುಗಳ ಮೇಲೆ, ಸ್ಪೆಶಲ್ ಟ್ಯಾಕ್ಸಿನಂತೆ ಇದೂ ಹೆಚ್ಚಿನ ದರವನ್ನು ಹೊಂದಿದೆ.

ಬಿ ಕೋಷ್ಟವನ್ನು ನೋಡಿದರೆ ಖರೀದಿ ಕರದ ದರ ಮತ್ತು ಈ ಮೊದಲನೇ ಕರದ ದರಇವೆರಡೂ ಒಂದೇ ಇರುವದು ಕಂಡುಬರುತ್ತದೆ. ಆದಕ್ಕೆ

ಕಾರಣವಿದೆ. ಈಗ ನಿಯಮದ ಕರ ಬಿನ್ ನಂಬರದಾರರ ಕಡೆಯಿಂದ ಮತ್ತು ಪರರಾಷ್ಟ್ರದಿಂದ ಬಂದ ಸರಕುಗಳ ಮೇಲೆ ಖರೀದಿ ಕರ, ವಿಕ್ರಿ ಮಾಡಿದ ಮೇಲೆ ಈ ಮೊದಲಿನೇ ಕರ ಇವೆರಡೂ ಬೀಳುವವಲ್ಲ? ಯಾಕೆಂದರೆ ಎರಡೂ ನಂಬರದಾರರಲ್ಲದವರಿಂದ ಬಂದವುಗಳು.

ಆದರೆ ಖರೀದಿ ಕರ ಕೊಡಬೇಕಾಗಿ ಬಂದಲ್ಲಿ: ಖರೀದಿ ಕರವನ್ನಾದರೂ ಕೊಡಬೇಕು. ಇಲ್ಲವೆ ವಿಕ್ರಿ ಕರವನ್ನಾದರೂ ಕೊಡಬೇಕು ಎಂದು ವಿಧಿಸಲಾಗಿದೆ. ಒಂದೇ ಸರಕಿನ ಮೇಲೆ ಎರಡೂ ಅಲ್ಲ. [ಸೆ ೮ (ಅ) (ii)] ಯಾವ ಕರವನ್ನು ಕೊಡಬೇಕೆನ್ನುವದನ್ನು ಆರಿಸಿಕೊಳ್ಳುವ ಕೆಲಸವನ್ನು ನಮಗೇ ಬಿಟ್ಟಿದ್ದಾರೆ

ಅದರ ಪರಿಣಾಮ ಈ ರೀತಿಯದು. ನೀವು ನಂಬರದಾರನ ಕಡೆಯಿಂದ ಸರಕನ್ನು ತಗೊಂಡಿದ್ದರೆ, ಆವನು ತನ್ನ ಮಾರಾಟ ಅಂದರೆ ನಿಮ್ಮ ಖರೀದಿಯ ಮೇಲೆ ಮೊದಲಿನ ಕರವನ್ನು ಕೊಡುವನು, ಎಂದಿಟ್ಟುಕೊಳ್ಳುವ. ಆದೇ ನೀವು ಬಿನ್ ನಂಬರದಾರರಿಂದ ತಂದರೆ **ನೀವೆ** ಆ ಕರವನ್ನು ಕೊಡುತ್ತೀರಿ. ಹೀಗಾಗಿ ಸರಕಾರಕ್ಕೆ ಮೊದಲನೇ ಕರವು ಒಟ್ಟಿನಲ್ಲಿ ಮುಟ್ಟಿದಂತಾಗುತ್ತದೆ. ಆದಕ್ಕೇನೆ ಖರೀದಿ ಕರ—ಅದು ಬೇಡವಾದರೆ ಮಾರಾಟ ಕರ ಇವೆರಡರಲ್ಲಿ ಒಂದು ಲಾಗೂ ಆಗುತ್ತದೆ.

ಹಾಗಿದ್ದರೆ ಇವೆರಡರಲ್ಲಿ ವ್ಯಾಪಾರಸ್ಥರು ಯಾವುದನ್ನು ಆರಿಸಿದರೆ ಒಳ್ಳೆಯದು? ಈ ಮಾತು ಮುಖ್ಯವಾಗಿ ಅವರವರ ವ್ಯವಹಾರವನ್ನು ಅವಲಂಬಿಸಿದೆ.

## ಖರೀದಿ ಕರವೇ, ಮಾರಾಟಕರವೆ?

ಖರೀದಿ ಕರವನ್ನೆ ಕೊಡುವೆ, ವಿಕ್ರಿಯ ಮೇಲೆ ಮೊದಲನೇ ಕರವನ್ನು ಕೊಡುವದಿಲ್ಲ ಎಂದರೆ, ನೀವು ಖರೀದಿ ಮಾಡಿದ ಕೂಡಲೇ ಅದರ ವಿಕ್ರಿಯು ಎಂದೇ ಆಗಲಿ ಆ ತ್ರೈಮಾಸಿಕದಲ್ಲಿ ನಿಮ್ಮ ಕೈಯಿಂದ ಕರದ ರಕಮು ಹೋಗುತ್ತದೆ. ಮತ್ತೆ, ಹಾಗೆ ಕೊಟ್ಟ ಕರವನ್ನು ನೇರವಾಗಿ ಯಾರಿಂದ ವಸೂಲು ಮಾಡಬೇಕು? ಇನ್ನು, ಖರೀದಿ ಕರವನ್ನು ಕೊಡೋಣದರಿಂದ

ಅನುಕೂಲವೇನಂದರೆ, ಒಮ್ಮೆ ಖರೀದಿ ಕರವನ್ನು ಕೊಟ್ಟು ಬಿಟ್ಟರೆ, ಮೊದಲನೇ ಕರದ ಪಾತ್ರತೆ, ಮುಕ್ತತೆಗಳನ್ನು ಸಿದ್ಧಮಾಡಿ ತೋರಿಸುವ ವಿಶೇಷ ತೊಂದರೆಯಿಲ್ಲ. ಇದರ ಇನ್ನೊಂದು ಅನುಕೂಲವೆಂದರೆ ನಿಮ್ಮ ಲಾಭಾಂಶದ ಪ್ರಮಾಣ ಹೆಚ್ಚಿಗೆ ಇದ್ದಾಗ ಖರೀದಿ ಮತ್ತು ಮಾರಾಟ ಇವುಗಳ ರಕಮಿನ ಅಂತರದ ಮೇಲೆ ಕರವು ಬೀಳುವದಿಲ್ಲ.

ಮಾರಾಟ ಕರವನ್ನು ನೀವು ಗೊತ್ತುಪಡಿಸಿಕೊಂಡಲ್ಲಿ, ಮೇಲೆ ಹೇಳಿದಂತೆ ನೀವು ಯಾವದೊಂದು ಮಾರಾಟದ ಖರೀದಿಯ ಬಗೆಯನ್ನು, ಅದರದೇ ಮಾರಾಟವಾಗಿದೆಯೆಂಬುದನ್ನು ಸಿದ್ಧಮಾಡಿ ಕೊಡುವ ಹೊಣೆ ಬೀಳುತ್ತದೆ. ಒಮ್ಮೆ ಖರೀದಿ ಮಾಡಿದ ಸರಕಿನ ಮಾರಾಟವು ಎಂದು ಆಗುವದೆಂಬುದು ಖಾತ್ರಿ ಇಲ್ಲದಾಗ, ಒಮ್ಮೆ ಖರೀದಿ ಕರವನ್ನು ಕೊಟ್ಟು ಬಿಡುವದಕ್ಕಿಂತ ಮಾರಾಟವಾದ ಹಾಗೆಲ್ಲ ಅಷ್ಟಷ್ಟರಂತೆ ಕರವನ್ನು ಕೊಡುತ್ತ ಹೋಗುವ ಅನುಕೂಲತೆ ಇದೆ. ಆದರಂತೆ, ಮೊದಲನೇ ಕರವನ್ನು ಗ್ರಾಹಕರ ಮೇಲೆ ಪ್ರತ್ಯೇಕವಾಗಿ ಆಕರಿಸಲು ಬರುತ್ತದೆ. ಅಲ್ಲದೆ, ಬಿ ಕೋಷ್ಟಕದ ೧-೧೬ರ ವರೆಗಿನ ನಮೂನೆಗಳಿಗೆ ಮಾರಾಟ ಕರವಿಲ್ಲದಿದ್ದು, ಬರೇ ಖರೀದಿಕರ ಇರುವದರಿಂದ, ಅಂಥ ಸರಕುಗಳಲ್ಲಿ ವ್ಯವಹಾರ ಮಾಡುವವರು, ಮೊದಲನೇ ಕರವನ್ನು ಕೊಡುತ್ತೇವೆ ಎಂದು ಹೇಳಿದರೆ ತಪ್ಪೇನು? ಏನಿದ್ದರೂ ಅವರವರ ವ್ಯಾಪಾರದ ಬಗೆಯನ್ನು ಈ ಆಯ್ಕೆಯು ಅವಲಂಬಿಸಿದೆ.

### ತಂದ ಸರಕಿನಲ್ಲಿ ಮಾರ್ಪಾಟಾದರೆ....

ಖರೀದಿ ಅಥವಾ ಮಾರಾಟಕರ ಕೊಡಬೇಕಾಗಿದ್ದ ಸಂದರ್ಭದಲ್ಲಿ ಆ ಸರಕುಗಳಲ್ಲಿ ಯಾವದೇ ಬದಲಾವಣೆ ಆಗಿರಬಾರದು. ಇದ್ದಕ್ಕಿದ್ದಂತೆ ಮಾರಾಟವಾಗಿರಬೇಕು, ಮಾರ್ಪಾಟಾದರೆ, ಮೊದಲಿನ ಸರಕಿನ ಖರೀದಿ ಕರವೇ ಬೇರೆ, ಮಾರ್ಪಾಟಾದ ಮಾಲಿನ ಮೇಲೆ ಕೊಡುವ ಮೊದಲೇ ಕರವೇ ಬೇರೆ. ಅಂಥ ಪ್ರಸಂಗದಲ್ಲಿ ಮಾರ್ಪಾಟು ಮಾಡುವವರು ಅರ್ಥಾತ್ ತಯಾರಕರು ಎರಡೂ ಕರವನ್ನು ಕೊಡಬೇಕಾಗಿ ಬರಬಹುದು. ತಯಾರಕರಿಗೆ ಇರುವ ಅನುಕೂಲವೇನೆಂದರೆ, ಖರೀದಿ ಕರವನ್ನು ಕಚ್ಚಾ ಸಾಮುಗ್ರಿಯ

ಮೇಲೆ ಕೊಟ್ಟಿದ್ದರೆ, ತಯಾರಾದ ಮಾಲಿನ ಮಾರಾಟದ ಮೇಲೆ ಕರಕೊಡುವಾಗ್ಗೆ, ಅಲ್ಲಿನ ಅದಕ್ಕೆ ಮುಂಚೆಯೇ ವಜಾ ಹಾಕಿಕೊಳ್ಳಬಹುದು. [ಸವಲತ್ತಿನ ರೂಲ್ ೧೧(೧)].

## ಆಥರಾಯಿಜೇಶನ್ನಿನವರಿಗೆ.

ಪರಪ್ರಾಂತಕ್ಕೆ ನಡೆಯುವ ನಮ್ಮ ವಹಿವಾಟಿಗೆ ಬಂಧನವಿರಬಾರದೆಂದು ಯಾರಾದರೂ ದೊಡ್ಡ ನಿರ್ಯಾತಗಾರರು ಬಂದು, ಪರಪ್ರಾಂತಕ್ಕೆ ಕಳಿಸಲೆಂದು ನಿಮ್ಮಲ್ಲಿ ಖರೀದಿಗೆ ಬಂದರೆ ನೀವು ಅವರಿಗೆ ಮಾರಾಟ ಕರವನ್ನು ಹಾಕುವಂತಿಲ್ಲ. ಅದಕ್ಕಾಗಿ ಅವರು ಪ್ರತ್ಯೇಕ ಅಧಿಕಾರ ಪತ್ರವನ್ನು (ಆಥರಾಯಿಜೇಶನ್) ಪಡೆದವರಿದ್ದು, ನಿಮ್ಮಿಂದ ಕೊಂಡ ಮಾಲನ್ನು ತಾವಾಗಲೀ, ಇನ್ನೊಬ್ಬ ನಂಬರದಾರನ ಮುಖಾಂತರವಾಗಲೀ ಪರಪ್ರಾಂತಕ್ಕೆ ಕಳಿಸುವವರಿದ್ದೇವೆಂದು ಬರಕೊಡುತ್ತಾರೆ [ಸೆ. ೮ (ಬ)]

ಹೀಗೆ ಬರಕೊಟ್ಟು ತಂದ ಮಾಲನ್ನು ಆರು ತಿಂಗಳೊಳಗಾಗಿ ಪರರಾಜ್ಯಕ್ಕೆ ರವಾನಿಸದಿದ್ದರೆ ಈ ಹಿಂದೆ ಹೇಳಿದಂತೆ ಖರೀದಿ ಕರವನ್ನು ಕೊಡಬೇಕಾಗುತ್ತದೆ. [ಸೆ. ೮ (ಬ) (ii)]

## ಸಾಮಾನ್ಯ ಕರ.

ಇದರ ಹೆಸರೇ ಸೂಚಿಸುವಂತೆ ಸಾಮಾನ್ಯವಾಗಿ ಎಲ್ಲ ಮಾರಾಟದ ಮೇಲೆಯೂ ಮತ್ತು ಹೆಚ್ಚಾಗಿ ಅರ್ಧ ಆಣೆಯ ದರದಂತೆಯೂ ಆಕಾರಿಸಲ್ಪಡುತ್ತದೆ. ಇದಕ್ಕಿರುವ ಮುಖ್ಯ ಅಪವಾದವೆಂದರೆ, ದೊಡ್ಡ ಪ್ರಮಾಣದ ಠೋಕದಾರರು ಇಲ್ಲವೆ ಉತ್ಪಾದಕರು, ಪ್ರತ್ಯೇಕವಾಗಿ ಲೈಸೆನ್ಸನ್ನು ಪಡಕೊಂಡು ಬಂದರೆ, ನೀವು ಅವರಿಗೆ ಸಾಮಾನ್ಯ ಕರವನ್ನು ವಸೂಲ ಮಾಡಲಿಕ್ಕೆ ಬರುವದಿಲ್ಲ. ಲೈಸೆನ್ಸದಾರರನ್ನು ಬಿಟ್ಟು ನಂಬರದಾರನಿರಲಿ, ಬಿನ್ ನಂಬರದಾರನಿರಲಿ ನೀವು ಅವನಿಗೆ ಸಾಮಾನ್ಯ ಕರವನ್ನು ಆಕಾರಿಸಲಡ್ಡಿಯಿಲ್ಲ. ನಿಮಗೆ ಇಂಥ ಲೈಸೆನ್ಸ ಇದ್ದು, ಪುನಃ ಮಾರಾಟಕ್ಕಾಗಲೀ, ಉತ್ಪಾದನೆಗಾಗಲೀ ಬೇಕಾಗಿದೆಯೆಂದು ಬರೆದುಕೊಟ್ಟರೆ ನಿಮ್ಮ ಖರೀದಿಯ ಕಾಲಕ್ಕೆ ಇತರರೂ ಹಾಕುವದಿಲ್ಲ. ಇಂಥ ಲೈಸೆನ್ಸನ್ನು ಯಾರಿಗೆ

ಕೊಡುತ್ತಾರೆಂದರೆ ಯಾರು, ನಂಬರದಾರರಿಗೆ ಮತ್ತು ಪರಪ್ರಾಂತಕ್ಕೆ ಒಂದು ವರ್ಷದಲ್ಲಿ ರೂ. ೫೦,೦೦೦ ಕ್ಕಿಂತ ಹೆಚ್ಚಿನ ಮಾರಾಟ ಮಾಡಿರುತ್ತಾರೆಯೋ ಅವರಿಗೆ ಲೈಸೆನ್ಸ ಕೊಡುವದರಲ್ಲಿ ಬರುವದು.

ಲೈಸೆನ್ಸಿನ ಉಪಯೋಗವು ನಿಮಗೆ ಸ್ಪಷ್ಟವಾಗಿರಲಿಕ್ಕೆ ಸಾಕು. ಅದೆಂದರೆ ನಿಮ್ಮ ಖರೀದಿಯ ಕಾಲಕ್ಕೆ ಸಾಮಾನ್ಯ ಕರವು ಬೀಳುವದಿಲ್ಲ. ಅಂದರೆ ಈ ಹಿಂದೆ ೧೯೪೬ ನೆಯ ಕಾಯಿದೆಯ ಪ್ರಕಾರ ನಂಬರದಾರರರಿಗೆ ಏನು ಸವಲತ್ತು ಇದ್ದಿತೋ ಅದೇ ಲೈಸೆನ್ಸಿನಿಂದ ಇದೆ.

ಲೈಸೆನ್ಸ ಪಡೆದ ಅಥವಾ ಲೈಸೆನ್ಸ ಇಲ್ಲದಿದ್ದ ಉತ್ಪಾದಕರು ತಮ್ಮ ಖರೀದಿಯ ಕಾಲಕ್ಕೆ ಕೊಡಬೇಕಾದ ಈ ಸಾಮಾನ್ಯ ಕರದ ವಿಚಾರದಲ್ಲಿ ಒಂದೆರಡು ಮಹತ್ವದ ನಿಯಮಗಳಿವೆ. ೨ಡಿ ಕೋಷ್ಟಕದ ೧-೧೪ರ ಸರಕುಗಳನ್ನು, ಯಾವದೇ ಉತ್ಪಾದಕನಿಗೆ ಕರಮುಕ್ತವಾಗಿ ಸಿಗುವದಿಲ್ಲ. ಅಲ್ಲಿ ಲೈಸೆನ್ಸಿನ ಆಟ ನಡೆಯುವದಿಲ್ಲ. ೧೯-೨೨. ೨೫-೪೦ ರ ವರೆಗಿನ ಅದೇ ಕೋಷ್ಟಕದ ಸರಕುಗಳನ್ನು ಲೈಸೆನ್ಸದಾರ-ಉತ್ಪಾದಕನು ಕರ ಮುಕ್ತವಾಗಿ ಪಡೆಯಲಾರನು. [ ಸೆ. ೯ (೨) ]

ಅದೇ ೯-೧೪ರ ವರೆಗಿನ ಸರಕುಗಳನ್ನು ನೀವು ಕಚ್ಚಾ ಸಾಮಗ್ರಿಯೆಂದು ಖರೀದಿ ಮಾಡಲಿ, ನಂಬರದಾರರಾದ ನಿಮಗೆ ಸಾಮಾನ್ಯ ಕರವು ರೂ.ಗೆ ೦-೦-೩ ಯಂತೆ ಮಾತ್ರ ಬೀಳುತ್ತದೆ. ಲೈಸೆನ್ಸಿನ ಜರೂರಿ ಸಹಿತ ಇಲ್ಲ

---

## ೩ನೇ ಪ್ರಕರಣ.

### ಕರಾಕರಣೆ ಮತ್ತು ಕರಮುಕ್ತತೆ.

ಇಷ್ಟರವರೆಗೆ ಕರವನ್ನು ಕೊಡಲಿಕ್ಕೆ ಯಾರು ಪಾತ್ರರೆಂಬುದನ್ನು ಮತ್ತು ಎಷ್ಟು ಬಗೆಯ ಕರಗಳನ್ನು ನಾವು ಕೊಡಬೇಕಾದೀತು ಎಂಬುದನ್ನು ನೋಡಿದೆವು. ಇನ್ನು ನಮ್ಮ ಮೇಲೆ ಕರದ ಆಕರಣೆಯನ್ನು ಹೇಗೆ ಮಾಡ

ಹಾಗೂ ತ್ರಯವನ್ನು, ವ್ಯವಹಾರದಲ್ಲಿ ಕೊಡತಗೊಳ್ಳಬೇಕಾದ ಕರದ ಬಗೆ ಯನ್ನು ಈ ಪ್ರಕರಣದಲ್ಲಿ ಹೇಳಲಾಗಿದೆ. ಅದರಂತೆ ಕೆಲವೊಂದು ಕರದ ರಕಮು ರಿಫಂಡ್ ಬರುವದುಂಟು. ಕರಾಕರಣೆಯಲ್ಲಿ ಮತ್ತಿತರ ಸವಲತ್ತು ಅಂದರೆ ಮುಕ್ತತೆ ಇದೆ. ಇದನ್ನೂ ಇದೇ ಪ್ರಕರಣದಲ್ಲಿ ವಿವೇಚಿಸಲಾಗಿದೆ

## ಕರಾಕರಣೆಯ ಬಗೆ.

ಕರಾಕರಣೆಯನ್ನೂ ನಮ್ಮ ವ್ಯವಹಾರವನ್ನವಲಂಬಿಸಿ ನಾಲ್ಕು ಭಾಗ ವಾಗಿ ವಿಂಗಡಿಸಬಹುದು.

—ನಾವು ಖರೀದಿ ಮಾಡುವಾಗ ಇನ್ನೊಬ್ಬ ವ್ಯಾಪಾರಸ್ಥರಿಗೆ ಕೊಡ ಬೇಕಾಗುವ ಕರಗಳು.

—ನಮ್ಮ ಖರೀದಿಯ ಮೇಲೆ ಸರಕಾರಕ್ಕೆ ಕೊಡಬೇಕಾದ ಖರೀದಿಕರ.

—ನಮ್ಮ ಮಾರಾಟದ ಮೇಲೆ ನಾವು ಕೊಡಬೇಕಾಗುವ ಮೊದಲನೇ ಕರ ಮತ್ತು ಸಾಮಾನ್ಯಕರ, ಮತ್ತು

—ನಾವು ಗಿರಾಕಿಗಳಿಂದ ನಮ್ಮ ವಿಕ್ರಿಯ ಮೇಲೆ ವಸೂಲು ಮಾಡ ಬಹುದಾದ ಕರಗಳು.

ಒಂದೊಂದಾಗಿ ನೋಡುವಾ.

೧. ನಾವು ಖರೀದಿ ಮಾಡುವಾಗ ಇನ್ನೊಬ್ಬ ನಂಬರದಾರ ವ್ಯಾಪಾ ರಸ್ಥರಿಗೆ ಮಾತ್ರ ಕರ ಕೇಳುವ ಅಧಿಕಾರವದೆ. ಅಂಥ ನಂಬರದಾರರು ನಮ್ಮ ಮೇಲೆ ಸಾಮಾನ್ಯಕರವನ್ನೂ, ಮೊದಲನೇ ಕರವನ್ನೂ ಹಾಕ ಬಹುದು ಅವರು ಮೊದಲನೇ ಕರವನ್ನು ಆಕಾರ ಮಾಡಿದ್ದರೆ, ಅದನ್ನು ನಮ್ಮ ಧಾರಣೆಯಲ್ಲಿ ಕೂಡಿಸಿಕೊಳ್ಳಬೇಕಾಗುವದಲ್ಲದೆ ಮುಂದೆ ನಮ್ಮ ವಿಕ್ರಿಯ ಮೇಲೆ, ನಮ್ಮ ಗಿರಾಕಿಗಳ ಮೇಲೆ ಆದನ್ನು ಹೊರಿಸಲಿಕ್ಕೆ ಬರುವ ದಿಲ್ಲ. ಸರಕಾರಕ್ಕೆ ನಾವು ಕೊಡಬೇಕಾಗಿಯೂ ಇಲ್ಲ. ಏಕೆಂದರೆ ನಮ್ಮ ಖರೀದಿಯು ಒಬ್ಬ ನಂಬರದಾರನಿಂದ ಆಗಿರುತ್ತದೆ.

೨. ನಾವು ಬಿನ್ ನಂಬರದಾರನಿಂದ ಮಾಲು ಖರೀದಿ ಮಾಡಿದಾಗ ಖರೀದಿ ಕರವನ್ನು ಕೊಡಬೇಕಾಗುವದೆಂದು ಹಿಂದೆಯೇ ಸೂಚಿಸಿದ್ದೇವೆ.

ಖರೀದಿ ಕರವನ್ನು ನೇರವಾಗಿ ನಮ್ಮ ಗಿರಾಕಿಗಳಿಂದ ತೆಗೆದುಕೊಳ್ಳಲು ಬರುವದಿಲ್ಲ.

೩. ನಮ್ಮ ಮಾರಾಟದ ಮೇಲೆ ಹೆಚ್ಚೆಂದರೆ ಎರಡು ಕರಗಳನ್ನು ಕೊಡಬೇಕಾಗುವದು ನಮ್ಮದೇ ಸ್ವಂತ ತಯಾರಿಕೆಯ ಸರಕು ಇದ್ದರೆ, ಪರಪ್ರಾಂತದಿಂದ ಬಂದ ಸರಕು ಇದ್ದರೆ ಅಥವಾ ಖರೀದಿ ಕರವು ಲಾಗೂ ಇದ್ದು ಅದನ್ನು ಕೊಟ್ಟಿರದಿದ್ದರೆ ಮೊದಲನೇ ಕರವನ್ನು ಕೊಡಬೇಕಾಗುತ್ತದೆ. ಸಾಮಾನ್ಯ ಕರವಂತೂ ಇದ್ದೇ ಇದೆ.

೪. ನಮ್ಮ ಮಾರಾಟವೊಂದರ ಮೇಲೆ ಸರಕಾರಕ್ಕೆ ಯಾವ ಕರ ಅಥವಾ ಕರಗಳನ್ನು ಕೊಡಬೇಕಾಗಿದೆಯೋ ಅವನ್ನು ನಮ್ಮ ಗಿರಾಕಿಗಳ ಕಡೆಯಿಂದ ವಸೂಲ ಮಾಡಬಹುದು. ವಸೂಲು ಮಾಡಿದರೇನೆ ಸರಕಾರಕ್ಕೆ ಕೊಡಬೇಕು, ನಮಗೇನು ಸಂಬಂಧವಿಲ್ಲ, ನಾವು ಕರವಸೂಲಿಯ ಎಜಂಟರಿದ್ದಹಾಗೆ ಎಂದು ಅನೇಕರು- ಭಾವಿಸುವದುಂಟು. ಅದು ತಪ್ಪು. ಒಂದು ವೇಳೆ ನಾವು ಕರವನ್ನು ಪ್ರತ್ಯೇಕವಾಗಿ ವಸೂಲ ಮಾಡಿರದಿದ್ದರೆ ಅದು ನಮ್ಮ ದರದಲ್ಲಿ ಕೂಡಿದೆಯೆಂದೇ ಲೆಕ್ಕಹಾಕಿ ನಮ್ಮ ಮೇಲೆ ಕರಾಕರಣೆಯನ್ನು ಮಾಡುತ್ತಾರೆ.

## ಮಾದರಿ ವ್ಯವಹಾರಗಳು

ಕರಗಳು ಯಾವ ಯಾವ ಪ್ರಸಂಗದಲ್ಲಿ ಬೀಳುವವೆಂದು ಈ ಹಿಂದೆ ವಿವರಿಸಿದ್ದೇವೆ. ಇನ್ನು ಕೆಲವೊಂದು ಮಾದರಿಯ ವ್ಯವಹಾರಗಳನ್ನು ತೆಗೆದುಕೊಂಡು, ಕರಾಕರಣೆಯನ್ನು ವಿವರಿಸುತ್ತೇವೆ

೧. ಮುಂಬಯಿಯ ಒಬ್ಬ ದಲಾಲನಿಂದ ನಾವು ಸರಕನ್ನು ತರಿಸಿ ಇಲ್ಲಿ ಕಿರುಕಳ ರೀತ್ಯಾ ಮಾರಾಟ ಮಾಡಿದರೆ—

—ನಾವು ನಮ್ಮ ಖರೀದಿಯ ಮೇಲೆ ದಲಾಲನಿಗೆ ಕೇವಲ ಸಾಮಾನ್ಯ ಕರವನ್ನೂ, ವಿಕ್ರಿಯ ಮೇಲೆಯೂ ಫಕ್ತ ಸಾಮಾನ್ಯ ಕರವನ್ನು ಕೊಡಬೇಕಾಗುವದು.

ನಮ್ಮ ಖರೀದಿಯು ನಂಬರುದಾರನ ಕಡೆಯಿಂದ ಆಗಿರುವದರಿಂದ್, ನಾವು ಖರೀದಿ ಕರವನ್ನು ಕೊಡಬೇಕಾಗಿಲ್ಲ. ದಲಾಲನು ಬೇರೋಬ್ಬರಿಂದ ಸರಕನ್ನು ತಂದಿರುವ ಸಂಭವವಿರುವದರಿಂದ ಮೊದಲನೇ ಕರವೂ ನಮ್ಮ ಮೇಲೆ ಬೀಳುವದಿಲ್ಲ. ಸಾಮಾನ್ಯ ಕರದಿಂದಲೂ ಮುಕ್ತತೆಯನ್ನು ಪಡೆಯ ಬೇಕೆಂದರೆ ನಮಗೆ ಲೈಸೆನ್ಸ ಇಲ್ಲ! ಇದಿಷ್ಟು ಖರೀದಿಯಾಯಿತು. ಇನ್ನು ವಿಕ್ರಿ. ಅದು ಒಬ್ಬ ಸಾದಾ ಗ್ರಾಹಕನಿಗೆ ಆಗಿರುವದರಿಂದ ಸಾಮಾನ್ಯ ಕರವು ಬೀಳುತ್ತದೆ. ಆ ಮಾಲಿನ ನಮ್ಮ ಖರೀದಿಯು ನಂಬರದಾರನಾದ ದಲಾಲನಿಂದ ಆಗಿರುವದರಿಂದ, ಮಾರಾಟ ಕರವನ್ನು ಕೊಡಬೇಕಾಗಿಲ್ಲ.

೨. ಪರಪ್ರಾಂತದಿಂದ ಸರಕನ್ನು ತರಿಸಿ ಇಲ್ಲಿಯ ನಂಬರದಾರರಿಗೆ ಮಾರಾಟ ಮಾಡಿದರೆ—

ಆ ಖರೀದಿಯ ಮೇಲೆ ಖರೀದಿ ಕರ ಇಲ್ಲವೆ ಆನಂತರ ಮೊದಲನೇ ಕರವನ್ನು ಕೊಡಬೇಕಾಗುತ್ತದೆ. ಸಾಮಾನ್ಯ ಕರವೂ ಬೀಳುತ್ತದೆ. ಫಕ್ತ ನೋಂದಣಿ ನಂಬರದಾರರಿಗೆ ಸಾಮಾನ್ಯ ಕರದಿಂದ ಮುಕ್ತತೆ ಇಲ್ಲ.

೩. ನಾವು ದಲಾಲರು, ರೈತನ ಕಡೆಯಿಂದ ಬಂದ ಮಾಲನ್ನು ಒಬ್ಬ ಲೈಸನ್ಸ ಉಳ್ಳ ಆಸಾಮಿಗೆ ಕೊಟ್ಟರೆ—

— ಆ ಮಾಲು ಬಿ ಕೋಷ್ಟಕದ ೧–೧೮ ವರೆಗಿನ ಮಾಲು ಆಗಿರದಿದ್ದರೆ ಖರೀದಿಕರವನ್ನು ಕೊಡಬೇಕಾಗುವದು. ಆನಂತರ ವಿಕ್ರಿಯ ಕಾಲಕ್ಕೆ ಯಾವ ಕರವೂ ಇಲ್ಲ.

ಮೊದಲಿನಂತೆ ಹೊಸ ಕಾಯದೆಯನ್ವಯ ದಲಾಲನಿಗೆ ಪ್ರತ್ಯೇಕ ಸ್ಥಾನವಿಲ್ಲ. ರೈತನ ಮಾಲನ್ನು ಅಂಗಡಿಯಲ್ಲಿಟ್ಟುಕೊಂಡಾಗ ಅದಕ್ಕೆ ಮಹತ್ವವಿಲ್ಲ. ಅದನ್ನು ಆಸಾಮಿಗೆ ಸಾಗಿಸಿದಾಗ ಏಕಕಾಲಕ್ಕೆ ದಲಾಲನಿಂದ ನಮ್ಮ ಖರೀದಿ, ಆಸಾಮಿಗೆ ನಮ್ಮ ವಿಕ್ರಿ ಆದಂತಾಯಿತು. ಮೇಲಿನ ಉದಾಹರಣೆಯಲ್ಲಿ ವಿಕ್ರಿಯ ಕಾಲಕ್ಕೆ ಯಾವ ಕರವೂ ಇಲ್ಲ. ಏಕೆಂದರೆ ಖರೀದಿಕರವನ್ನೂ ಕೊಡುತ್ತೇವಾದ್ದರಿಂದ ಮೊದಲನೇಕರವಿಲ್ಲ. ಆಸಾಮಿಗೆ ಲೈಸೆನ್ಸ ಇದೆ. ಆದ್ದರಿಂದ ಸಾಮಾನ್ಯ ಕರವನ್ನು ಅವನಿಗೆ ಹಾಕಲು ಬರುವದೇ ಇಲ್ಲ.

೪. ನಾವು ಮಾಲನ್ನು ತಯಾರಿಸುತ್ತೇವೆ. ನಮಗೆ ಲೈಸೆನ್ಸ ಇದೆ. ನಮ್ಮ ಖರೀದಿಯು ನಂಬರದಾರನ ಕಡೆಯಿಂದ ಇದೆ. ನಮ್ಮ ಸಿದ್ಧವಾದ ಮಾಲನ್ನು ನಂಬರದಾರನಿಗೆ ಕೊಟ್ಟರೆ—

— ನಮ್ಮ ಕಚ್ಚಾ ಮಾಲಿನ ಖರೀದಿಯ ಮೇಲೆ ಸಾಮಾನ್ಯಕರ ಬೀಳುವದಿಲ್ಲ. ಏಕೆಂದರೆ ನಾವು ಲೈಸೆನ್ಸದಾರರು. ಮೊದಲನೇ ಕರವು ಬೀಳುವದು. ನಮ್ಮ ಮಾರಾಟದಾರನ ಖರೀದಿಯನ್ನವಲಂಬಿಸಿದೆ. ಸಿದ್ಧ ವಾದ ಮಾಲನ್ನು ಮಾರಾಟ ಮಾಡಿದಾಗ ಅದು ರೂಪಾಂತರ ಹೊಂದಿದ್ದಾ ಯಿತು. ಕಾರಣ ಹೊಸದಾಗಿ ಮೊದಲನೇ ಕರವನ್ನು ಕೊಡಬೇಕಾಯಿತು. ಸಾಮಾನ್ಯಕರವೂ ಬೀಳುವದು. ಏಕೆಂದರೆ ನಮ್ಮಿಂದ ಖರೀದಿ ಮಾಡುವವನಿಗೆ ಕೇವಲ ನಂಬರ ಇದೆ. ಲೈಸೆನ್ಸ ಇಲ್ಲ.

೫. ನಾವು ನಂಬರದಾರನಿಂದ ತಂದಿದ್ದ ಮಾಲನ್ನು ಪರಪ್ರಾಂತ ಕ್ಕೆಯೂ, ಆಥರಾಯಿಜೇಶನ್ ಇದ್ದವನಿಗೂ ಮಾರಾಟ ಮಾಡಿದಾಗ—

— ನಮ್ಮ ಖರೀದಿಯ ಕಾಲಕ್ಕೆ ಸಾಮಾನ್ಯ ಕರವನ್ನು ಕೊಡುತ್ತೇವೆ. ಮೊದಲನೇ ಕರವೂ ಬೀಳಬಹುದು. ಅದನ್ನು ಪರಪ್ರಾಂತಕ್ಕೆ ನಾವೇ ಕಳಿಸಿ ದಲ್ಲಿ ಆ ಮಾರಾಟದ ಮೇಲೆ ಯಾವ ಕರವೂ ಇಲ್ಲ. ಆಥರಾಯಿಜೇಶನ್ ಇದ್ದವನಿಗೆ ಕೊಟ್ಟರೆ ಆಗೂ ಯಾವ ಕರವೂ ಬೀಳುವದಿಲ್ಲ. ಮೊದಲನೇ ಕರ ಬೀಳುವದಿಲ್ಲ. ಏಕೆಂದರೆ ನಮ್ಮ ಖರೀದಿಯು ನಂಬರದಾರನಿಂದ ಅದೆ. ಸಾಮಾನ್ಯ ಕರವೂ ಬೀಳುವದಿಲ್ಲ. ಕಾರಣವೆಂದರೆ ಅವನಿಗೆ ಆಥರಾಯಿ ಜೇಶನ್ ಇದೆಯೆಂದಲ್ಲ; ಆಥರಾಯಿಜೇಶನ್ ಇದ್ದವನಿಗೆ ಲೈಸನ್ಸೂ ತಂತಾನೆ ಸಿಗುವದು. ಆ ಲೈಸನ್ಸಿನ ಮೂಲಕವಾದ ಸರ್ಟಿಫಿಕೇಟನ್ನು ನಾವು ಪಡೆಯಬೇಕಾಗುತ್ತದೆ.

## ಕರಾಕರಣೆಯ ಸೂತ್ರಗಳು

ಮೇಲಿನ ಉದಾಹರಣೆಗಳಿಂದ ಹೊರಡುವ ಕೆಲ ಮುಖ್ಯ ಸೂತ್ರಗ ಳೆಂದು ಕರಾಕರಣೆಯ ಸಂಬಂಧದಲ್ಲಿ ಈ ಕೆಳಗಿನವುಗಳನ್ನು ಹೇಳಬಹುದು.

೧ ಟಿನ್ ನಂಬರದಾರನ ಕಡೆಯಿಂದ ಕೊಂಡ ಸರಕಿನ ಮೇಲೆ ಖರೀದಿ ಕರವು ಬೀಳುತ್ತದೆ. ಖರೀದಿ ಕರವನ್ನು ಕೊಡದಿದ್ದರೆ ಮುಂದೆ ಮಾರಾಟವಾದ ಮೇಲೆ ಮೊದಲನೇ ಕರವನ್ನಾದರೂ ಕೊಡಬೇಕು.

೨. ವಿಕ್ರಿಮಾಡುವ ಕಾಲಕ್ಕೆ ಒಂದೇ ಪೆಟ್ಟಿಗೆ ಎರಡು ಕರಗಳನ್ನು ಕೊಡುವದು ಲಾಗೂ ಆಗುತ್ತದೆ. ಮೊದಲನೇ ಕರ, ಸಾಮಾನ್ಯ ಕರ.

ಮೊದಲನೇ ಕರವನ್ನು ಲಾಗೂ ಮಾಡುವದು ಬಂದಾಗ ನಮ್ಮ ಖರೀದಿ ನಂಬರದಾರರಿಂದ ಇದೇ ಎಂಬುದನ್ನು ನೋಡಬೇಕು. ಸಾಮಾನ್ಯ ಕರವನ್ನು ಹಾಕುವಾಗ, ಗ್ರಾಹಕನು ಲೈಸೆನ್ಸದಾರನಿದ್ದಾನೊ ಇಲ್ಲವೊ ಎಂಬುದನ್ನು ನೋಡಬೇಕು.

೩. ಪರಪ್ರಾಂತಕ್ಕೆ ಕಳಿಸಲಾದ ಯಾವದೇ ಮಾರಾಟದ ಮೇಲೆ ಎಂಥದೇ ಕರವಿಲ್ಲ.

## ಕರ ಮುಕ್ತತೆ

ಕರಾಕರಣೆಯ ಬಗ್ಗೆ ಇಷ್ಟು ಹೇಳಿಯಾದಮೇಲೆ, ಕರಭಾರದಿಂದ ಮುಕ್ತತೆ ಎಲ್ಲೆಲ್ಲಿ ಇದೆಯೆಂಬುದನ್ನು ಗಮನಿಸಿವುದು ಅವಶ್ಯವಾಗಿದೆ. ಒಂದು ದೃಷ್ಟಿಯಲ್ಲಿ, ಈ ಕೆಳಗೆ ಹೇಳಿದವುಗಳು ಕರ ಮುಕ್ತತೆಗಳೇನಲ್ಲ. ಕರ ಕೊಡುವದನ್ನು ಕೊಡಲೇಬೇಕು. ಕೊಟ್ಟು ರಿಫಂಡ್ ಕೇಳಬೇಕು ಎಂಬ ರೀತಿಯಲ್ಲಿ ಇವೆಯಾದ್ದರಿಂದ, ಕರದಿಂದ ಮುಕ್ತತೆ ಎಂದು ಇವನ್ನು ತಿಳಿಯದೇ, ಕರಭಾರದಿಂದ ಮುಕ್ತತೆ ಎಂದು ತಿಳಿಯಬೇಕಾಗಿ ವಿನಂತಿ.

ಪ್ರಾರಂಭಕ್ಕೆ ಎ ಕೋಷ್ಟಕದ ಸರಕುಗಳ ಸಂಪೂರ್ಣ ಕರಮುಕ್ತತೆಯಂತೂ ಎಲ್ಲರಿಗೂ ಗೊತ್ತಿದ್ದ ಮಾತಾಗಿದೆ. ಹೋದ ವರ್ಷದ ಪಟ್ಟಿಯಂತೆಯೇ ಇದು ಇರುತ್ತದೆ. ಇಷ್ಟೇ. ಅಡಿಕೆ, ಕಡ್ಡಿಪೆಟ್ಟಿಗೆಗಳನ್ನು ಆ ಪಟ್ಟಿಯಿಂದ ತೆಗೆದು, ಮೊದಲನೇ ಕರವನ್ನು ಅವುಗಳ ಮೇಲೆ ಹಾಕಲಾಗಿದೆಯೆಂದು ಈ ಹಿಂದೆ ಹೇಳಿದ್ದೇವೆ. ಈ ನೇರವಾದ ಕರ ಮಾಫಿನ ಜೊತೆಗೆ, ಪರಪ್ರಾಂತಕ್ಕೆ ಕಳಿಸುವ ವ್ಯವಹಾರವೂ ಬಂದಿತು. ಅದೂ ಸಂಪೂರ್ಣ ಕರ ಮುಕ್ತವಿದೆ. (ಸೆ ೪೬).

## ಖರೀದಿ ಕಾಲಕ್ಕೆ ಕೊಟ್ಟ ಕರದ ರಿಫಂಡ್

ನಾವು ಒಬ್ಬ ನಂಬರದಾರನ ಹತ್ತಿರ ಖರೀದಿಗೆ ಹೋದರೆ ಅವನು ನಮ್ಮ ಮೇಲೆ ಸಾಮಾನ್ಯ ಕರವನ್ನು ಲಾಗು ಮಾಡುವನು. ಇನ್ನು ನಾವು ಇನ್ನೊಬ್ಬ ನಂಬರದಾರನಿಗೆ ಕೊಟ್ಟರೆ, ನಾವೂ ಅವನಿಗೆ ಸಾಮಾನ್ಯ ಕರವನ್ನು ಹಾಕುತ್ತೇವೆ. ಅಂದಮೇಲೆ, ಮತ್ತೆ ಇದು ಬಹುಮುಖೀ ಕರವಂತೆಯೇ ಆಯಿತಲ್ಲ ಎಂದು ಸಂಶಯ ಬರುತ್ತದಲ್ಲವೆ?

ಆದರೆ ವಸ್ತುಸ್ಥಿತಿ-ಹಾಗೇನಿಲ್ಲ. ಖರೀದಿಯ ಮೇಲೆ ಕೊಟ್ಟ ಸಾಮಾನ್ಯ ಕರವು ಮರಳ ಸಿಗುತ್ತದೆ. [ಸ. ರೂಲ ೧೧ (೩) (ಅ)] ಖರೀದಿಯ ಕಾಲಕ್ಕೆ ೨೫ ರೂ. ಸಾಮಾನ್ಯ ಕರ ಕೊಟ್ಟಿದ್ದೆವೆಂದು ತಿಳಿಯೋಣ. ಇರಲಿ. ಕೆಲ ಕಾಲವಾದ ಮೇಲೆ ಆ ಸರಕು ಮಾರಾಟವಾಗುತ್ತದೆ. ಆಗ ನಾವು ೩೦ ರೂ. ಸಾಮಾನ್ಯ ಕರವನ್ನು ಕೊಡಬೇಕಾಗಿದೆಯೆಂದು ತಿಳಿಯೋಣ. ಆಗ ಈ ಹಿಂದೆ ಕೊಟ್ಟಿದ್ದ ೨೫ ರೂ. ಗಳನ್ನು ವಜಾ ಮಾಡಿಯೆ ಬಾಕಿ ೫ ರೂ. ಯನ್ನು ತುಂಬಿಬಿಟ್ಟರೆ ಸಾಕು. ಒಂದು ವೇಳೆ ತುಂಬಬೇಕಾದ ರಕಮು, ಕೊಟ್ಟ ರಕಮಿಗಿಂತಲೂ ಕಡಿಮೆ ಇದ್ದರೆ, ಅಥವಾ ಸಾಮಾನ್ಯ ಕರ ಕೊಡುವದು ಒಟ್ಟೀ ಇರದಿದ್ದರೆ, ಖರೀದಿ ಕಾಲಕ್ಕೆ ಕೊಟ್ಟ ರಕಮನ್ನು ರಿಫಂಡ್ ಎಂದು ಕೇಳಲಿಕ್ಕೆ ಬರುತ್ತದೆ.

ತಾತ್ಪರ್ಯವೇನೆಂದರೆ, ೧೯೪೬ ರ ಕಾಯದೆಯಲ್ಲಿ ನಂಬರದಾರನಿಗೆ ತನ್ನ ಖರೀದಿಯ ಕಾಲಕ್ಕೇ ಕರಮುಕ್ತತೆ ಇರುತ್ತಿತ್ತು. ಈಗ ಆ ಮಾಲಿನ ಮಾರಾಟ ಮಾಡಿ ಆನಂತರ ಖರೀದಿ ಕಾಲಕ್ಕೆ ಕೊಟ್ಟ ಸಾಮಾನ್ಯ ಕರವನ್ನು ವಜಾ ಹಾಕಬೇಕು. ಇಲ್ಲವೆ ಕೇಳಬೇಕೆಂದಂತಾಯಿತು.

## ಉತ್ಪಾದಕರು ಕೊಟ್ಟ ಕರಗಳ ಮರತು.

ಉತ್ಪಾದಕರು ಕೊಂಡ ಸರಕಿನ ರೂಪಾಂತರ ಮಾಡುವದರಿಂದ, ಖರೀದಿಯ ಕಾಲಕ್ಕೂ ಮೊದಲನೇ ಕರವನ್ನು ಕೊಡಬಹುದು. ಸಿದ್ಧ ಸರಕನ್ನು ಮಾರಿದಾಗಲೂ ಈ ಮೊದಲನೆಯ ಕರವು ಬೀಳುವದು. ಇದರಿಂದ ತಯಾರಿಕೆಯ ವೆಚ್ಚ ಅಷ್ಟರಮಟ್ಟಿಗೆ ಏರಿದಂತಾಗುತ್ತದೆ. ಈ ಬಗ್ಗೆ ಮತ್ತೆ

ಸೌಕರ್ಯವಿದೆ. ಇಂಥವರು ತಮ್ಮ ಕಚ್ಚಾ ಮಾಲಿನ ಮೇಲೆ ಕೊಟ್ಟ ವಿಕ್ರಿ ಕರ, ಖರೀದಿಕರ ಮತ್ತು 'ಬಿ' ಕೋಷ್ಟಕದ ೧-೧೮ರ ವರೆಗಿನ ಸರಕುಗಳ ಮೇಲೆ ಕೊಟ್ಟ ಸಾಮಾನ್ಯ ಕರವನ್ನೂ, ರಿಫಂಡ ಕೇಳಬಹುದು. [ಸ. ರೂಲ್ ೧೧ (೧)] ಉತ್ಪಾದಕನಿಗೆ ಇರುವ ಹೆಚ್ಚಿನ ಅನುಕೂಲತೆಯೆಂದರೆ ತನ್ನ ಸಿದ್ಧ ಸರಕುಗಳು ಮಾರಾಟವಾದರೇನೇ ಇವುಗಳನ್ನು ಪರತ ಕೇಳಬೇಕು ಎಂದು ಇಲ್ಲ. ಉತ್ಪಾದನೆಗೆ ಆ ಸರಕುಗಳನ್ನು ತೊಡಗಿಸಿದ ತ್ರೈಮಾಸಿಕ ವಲ್ಲಿ ತಾನು ಕೊಡುವ ಮೊದಲನೇ ಕರ, ಸಾಮಾನ್ಯ ಕರಗಳಲ್ಲಿ ವಜಾ ಹಾಕಬಹುದು. ಇಲ್ಲವೆ ಪರತ ಕೇಳಬಹುದು.

ಒಂದು ವೇಳೆ ಸಿದ್ಧ ಸರಕುಗಳನ್ನು ಕೆಲವನ್ನು ಪರಪ್ರಾಂತಕ್ಕೆ ಕಳಿಸಿದರೆ ಕಚ್ಚಾ ಮಾಲಿನ ಮೇಲೆ ಕೊಟ್ಟ ಕರ ಈಗ ಪರತು ಕೇಳುವ ಹಣದಲ್ಲಿ ಪರಪ್ರಾಂತದ ಮಾರಾಟದಬೆಲೆಗೆ ರೂ.೦-೦-೩ ಯಂತೆ ಲೆಕ್ಕಹಾಕಿ ಅಷ್ಟನ್ನು ವಜಾ ಹಾಕಿ ಉಳಿದ ಹಣವನ್ನು ಆಮೇಲೆ ಪರತು ಕೇಳಬೇಕಾಗುತ್ತದೆ [ಸ. ರೂಲ್ ೧೧ (೧) (ii)]

ಉದಾಹರಣೆಯಿಂದಲೇ ಸ್ಪಷ್ಟಪಡಿಸೋಣ. ಕಚ್ಚಾ ಸಾಮಗ್ರಿಯ ಮೇಲೆ ಈ ರೀತಿ ಅವನು ಕರವನ್ನು ಕೊಟ್ಟಿದ್ದಾನೆ—

| | | |
|---|---|---|
| [ಅ] ೧-೧೮ ರಲ್ಲಿಯ ಒಂದು ಸರಕಿನ ಮೇಲೆ ಸಾಮಾನ್ಯಕರ. | | ೧೦—೦—೦ |
| [ಆ] ಬಿನ್ ನಂಬರದಾರರಿಂದ ಕೊಂಡದ್ದರ ಸರಕಿನ ಮೇಲೆ ಖರೀದಿಕರ | | ೨೫—೦—೦ |
| [ಇ] ನಂಬರದಾರರಿಂದ ತಂದದ್ದರ ಮೇಲೆ ಕೊಟ್ಟ ವಿಕ್ರಿ ಕರ | | ೩೫—೦—೦ |
| | ರೂ. | ೬೦—೦—೦ |
| ಪಕ್ಕಾ ಮಾಲನ್ನು ತಯಾರಿಸಿದ ಮೇಲೆ ಪರಪ್ರಾಂತಕ್ಕೆ ಕಳಿಸಿದ ಮಾಲಿನ ಕಿಮ್ಮತ್ತು ೬೪೦ ರೂ. ಇದರ ಮೇಲೆ ರೂ.ಗೆ ೦-೦-೩ ಯಂತೆ ವಜಾ. | ರೂ. | ೧೦—೦—೦ |
| | ರೂ. | ೫೦—೦—೦ |

ಉತ್ಪಾದಕನಿಗೆ ರೂ. ೫೦-೦-೦ ಮಾತ್ರ ಪರತು ಸಿಗುತ್ತದೆ. ಇಲ್ಲವೆ ತಾನು ಕೊಡುವ ಕರದಲ್ಲಿ ವಜಾ ಹಾಕಲು ಬರುತ್ತದೆ.

ಅದರಂತೆ ಇತರ ಕಚ್ಚಾ ಸರಕುಗಳ ಮೇಲೆ ಕೊಟ್ಟಿದ್ದ ಸಾಮಾನ್ಯ ಕರವೂ ಅವನಿಗೆ ಪರತು ಸಿಗುತ್ತದೆ. ಆ ಮಾಲನ್ನು ಉತ್ಪಾದನೆಗೆ ತೊಡಗಿಸಿದ ತ್ರೈಮಾಸಿಕದಲ್ಲಿಯೇ ಸಾಮಾನ್ಯ ಕರವನ್ನು ವಜಾ ಹಾಕಬಹುದು. [ ಸ. ರೂಲ್ ೧೧. (೨) (ಬ) ]

## ಬಹುಮುಖೀ ಕರದ ರಿಫಂಡ್

ಹೊಸ ಕಾಯದೆ ಬರುವ ಹಿಂದಿನ ದಿನ ಹಳೆಯ ಮಾಲಿನ ಸ್ಟಾಕು ಇದ್ದೇ ಇರುತ್ತದೆ. ಇದನ್ನು ಬಿನ್ ನಂಬರದಾರರ ಕಡೆಯಿಂದಾದ ಖರೀದಿಯೆಂದು ತಿಳಿದು, ಆ ಮಾಲಿನ ಮಾರಾಟದ ಮೇಲೆ ಮೊದಲನೇ ಕರ, ಸಾಮಾನ್ಯಕರ ಇವೆರಡನ್ನೂ ಆಕಾರಿಸುತ್ತಾರೆ. ಅಂದರೆ ಬಹುಮುಖೀ ಕಾಲದಲ್ಲಿ ಅವುಗಳ ಮೇಲೆ ಕೊಟ್ಟಿದ್ದ ಕರದ ದೃಷ್ಟಿಯಿಂದ ಲುಕ್ಸಾನ ಆದಂತೆಯೇ ಅಲ್ಲವೆ ?

ಆ ಕಾರಣ ೧೯೫೪-೫೫ರ ವರ್ಷದ ನಿಮ್ಮ ಲೆಕ್ಕ ತಪಾಸಣೆ ಮಾಡುವಾಗ, ಈ ರೀತಿ ನಾವು ಬಹುಮುಖೀ ಕರವನ್ನು ಕೊಟ್ಟಿದ್ದಿದ್ದರೆ ಸ್ಟಾಕ ಇದ್ದ ಮಾಲಿನ ಮೇಲೆ ಉಳಿದಿರಬಹುದಾದ ಕರವನ್ನು ಲೆಕ್ಕಹಾಕಿ ಪರತು ಕೊಡುತ್ತಾರೆ. ಇಲ್ಲವೆ ಕೊಡಬೇಕಾದ ರಕಮಿನಲ್ಲಿ ಅವರೇ ವಜಾ ಹಾಕುತ್ತಾರೆ. [ ಸ. ರೂಲ್ ೧೧ (೩) ] ಮೇಲಿನಂತೆ ಬಹುಮುಖೀ ಕರಗಳನ್ನು ತ್ರೈಮಾಸಿಕದಲ್ಲಿ ವಜಾ ಹಾಕಲು ಬರುವದಿಲ್ಲ. ಇನ್ನು ಸ್ಟಾಕ್ ಇದ್ದ ಮಾಲಿನ ಮೇಲೆ ಅಮುಕ ೨೦೦ ರೂ. ಕರವು ನಮಗೆ ಬಿದ್ದಿದೆಯೆಂದು ತಿಳಿಯುವಾ. ಅದೇ ಮಾಲಿನ ವಿಕ್ರಿಯ ಮೇಲೆ ನೀವು ಕೊಡಬೇಕಾಗುವ ಕರದ ರಕಮು ೧೮೦ ರೂ. ಮಾತ್ರ ಆದರೆ. ನಿಮಗೆ ಪೂರ್ಣ ೨೦೦ ರೂ. ಪರತು ಬರುವದಿಲ್ಲ. ೧೮೦ ರಷ್ಟು ಮಾತ್ರ ವಜಾ ಹೋಗುತ್ತದೆ.

ಒಂದೇ ಒಂದು ಕರಾರು ಇದೆ. ಸ್ಟಾಕ ಇದ್ದ ಮಾಲಿಗೆ ಕೊಟ್ಟಿದ್ದ ಬಹುಮುಖೀ ಪದ್ಧತಿಯ ಕರಗಳು ಮಾತ್ರ ಪರತು ಸಿಗುತ್ತವೆ. ೧೯೫೩ ರ

ಕಾಯಿದೆ ಪ್ರಕಾರ ಕೊಟ್ಟಿರುವುಗಳಲ್ಲ. ಇನ್ನೊಂದು ಮಹತ್ವದ ಮಾತೆಂದರೆ ಆ ಸ್ಟಾಕ್ ಮಾಲಿನ ವಿಕ್ರಿ ३೧—३—೧೯೫೫ ರೊಳಗಾಗಿ ಮುಗಿದಿರಬೇಕು. ಇಲ್ಲವಾದರೆ ಎಷ್ಟು ಮಾರಾಟವಾಗದೆಯೋ ಅಷ್ಟರ ಖರೀದಿಯ ಮೇಲೆ ನೀವು ಕೊಟ್ಟಿದ್ದ ಬಹುಮುಖೀ ಕರಗಳು ಮರಳು ಸಿಗುತ್ತವೆ.

## ಗುತ್ತಿಗೆ ಹಣದ ಸಾಮಾನ್ಯ ಕರ

## Composition of tax

ಇವೆಲ್ಲಕ್ಕಿಂತ ಹೆಚ್ಚಿನ ಸೌಲತ್ತು ಎಂದರೆ, ಸಾಮಾನ್ಯ ಕರವನ್ನು ಕೊಡುವದರ ಬದಲು, ಪ್ರತಿ ಮೂರು ತಿಂಗಳಿಗೆ ಗೊತ್ತು ಪಡಿಸಿದಷ್ಟು ಗುತ್ತಿಗೆ ಹಣವನ್ನು ಕೊಟ್ಟು ಬಿಡುವುದು. ಇದು ಕಿರುಕಳ ಮಾರಾಟಗಾರರಿಗೆ ಬಹಳ ಅನುಕೂಲವಾಗುದು. [ಸ. ರೂಲ್ ೧೦].

ಮಾರಾಟದ ತಪಶೀಲುಗಳನ್ನು ಇಟ್ಟು ಆನಂತರದ ಬೇರೆ ಬೇರೆ ದರಗಳಲ್ಲಿ ಅವುಗಳ ಲೆಖ್ಖ ಬರೆದು, ಕರವನ್ನು ಕೊಡುತ್ತ ಹೋಗುವದೆಂದರೆ, ಅದಕ್ಕೆ ಹತ್ತುವ ತ್ರಾಸ, ತಗಲುವ ಖರ್ಚು ಸಾಕಷ್ಟಿವೆ. ಈ ಗುತ್ತಿಗೆ ಹಣ ಕೊಡುವದರಿಂದ ಅವಾವ ತೊಂದರೆಗಳೂ ಇಲ್ಲ. ಇದು ಸಾಮಾನ್ಯ ಕರಾಕರಣೆಗೆ ತೊಂದರೆ ಅನ್ವಯಿಸುವದಲ್ಲದೆ, ಮೊದಲನೇ ಕರ ಅಥವಾ ಖರೀದಿಕರ ಕೊಡುವದಿದ್ದರೆ ಅವನ್ನು ಪ್ರತ್ಯೇಕವಾಗಿ ಕೊಡುವುದು ಇದ್ದೇ ಇದೆ.

ಇದಕ್ಕೆ ಸಂಬಂಧಪಟ್ಟ ವಿವರಗಳು ಇಂತಿವೆ—

೧. ಕಳೆದ ವರ್ಷದಲ್ಲಿ ನಿಮ್ಮ ಖರೀದಿಯು ೫೫ ಸಾವಿರ ರೂ. ಗಳಿಗಿಂತ ಹೆಚ್ಚಾಗಿ ಇರಬಾರದು.

೨. ನೀವು ಲೈಸೆನ್ಸ ಧಾರಣ ಮಾಡಿರಕೂಡದು.

३. ನಿಮ್ಮದು ಪುನರ್ಮಾರಾಟವಿರಬೇಕು. ಉತ್ಪಾದಕರಿರಬಾರದು. (ಕೆಲವೊಂದು ಉತ್ಪಾದಕರಿಗೂ ಇದನ್ನು ಅನ್ವಯಿಸುವ ವಿಚಾರ ಸರಕಾರದ ಮುಂದೆ ಇದೆ.)

ಹೀಗಿದ್ದಲ್ಲಿ, ನೀವು ಕೆಳಗೆ ಕಾಣಿಸಿದ ಕೋಷ್ಟಕದಂತೆ ಗುತ್ತಿಗೆ ಹಣವನ್ನು, ನಿಮ್ಮ ಮಾರಾಟ ಎಷ್ಟೇ ಆಗಿರಲಿ ಕೊಟ್ಟುಬಿಟ್ಟರಾಯಿತು.

| ಒಟ್ಟು ವಾರ್ಷಿಕ ಖರಿದಿಯು— | ಪ್ರತಿ ತ್ರೈಮಾಸಿಕಕ್ಕೆ ಕೊಡುವ ಹಣ |
|---|---|
| ರೂ. ೨೦ ಸಾವಿರದ ಒಳಗಿದ್ದರೆ | ರೂ. ೧೫ |
| ರೂ. ೨೦ ಸಾವಿರದಿಂದ ೩೦ ಸಾವಿರದ ಒಳಗಿದ್ದರೆ | ರೂ. ೨೨ |
| ರೂ ೩೦ ಸಾವಿರದಿಂದ ೪೦ ಸಾವಿರದ ಒಳಗಿದ್ದರೆ | ರೂ. ೩೦ |
| ರೂ. ೪೦ ಸಾವಿರದಿಂದ ೫೦ ಸಾವಿರದ ಒಳಗಿದ್ದರೆ | ರೂ ೪೦ |
| ರೂ. ೫೦ ಸಾವಿರದಿಂದ ೫೫ ಸಾವಿರದ ಒಳಗಿದ್ದರೆ | ರೂ. ೪೫ |

ಈ ಹಣವಲ್ಲದೆ ನಿಮ್ಮ ಖರೀದಿಯು ಬಿನ್ ನಂಬರದಾರರ ಕಡೆಯಿಂದ ಇದ್ದು ಅವುಗಳ ಮಾರಾಟವನ್ನು ನೀವು ಮಾಡಿದ್ದರೆ ಅಂಥ ಮಾರಾಟದ ರಕಮಿನ ಮೇಲೆ ರೂ.ಗೆ ಅರ್ಧ ಆಣೆಯಂತೆ ಪ್ರತಿ ತ್ರೈಮಾಸಿಕಕ್ಕೆ ಮೇಲಿನ ಗುತ್ತಿಗೆ ರಕಮಿನ ಸಂಗಡ ತುಂಬಬೇಕಾಗುವದು.

ಇನ್ನೊಂದು ರಕಮಿನ ಮೇಲೆಯೂ ಅರ್ಧ ಆಣೆಯಂತೆ ಕರವನ್ನು ಸೇರಿಸಲಿಕ್ಕಿದೆ. ಎಂದಿನಿಂದ ನೀವು ಗುತ್ತಿಗೆಯ ರೂಪದಲ್ಲಿ ಸಾಮಾನ್ಯ ಕರವನ್ನುಕೊಡುವದು ಆರಂಭವಾಗುತ್ತದಯೋ ಆ ಅವಧಿಯು ಸುರುವಾಗಿ ಬಿನ್ ನಂಬರದಾರರಿಂದ ಖರೀದಿ ಮಾಡಿದ ಮಾಲಿನ ಸಂಗ್ರಹದ ಬೆಲೆಯನ್ನು ಮೇಲಿನ ಬಿನ್ ನಂಬರದಾರರ ಖರೀದಿಯ ಬೆಲೆಯಲ್ಲಿ ಕೂಡ್ರಿಸಿಕೊಂಡು, ಆದರ ಮೇಲೆಯೂ ಅರ್ಧ ಆಣೆಯ ಕರವನ್ನು ತುಂಬಬೇಕು.

ನಿಮ್ಮ ಮಾರಾಟದ ಸರಕುಗಳಲ್ಲಿ ಎ ಕೋಷ್ಟಕದ ಅಂದರೆ ಸರ್ವಕರ ಮಾಫ ಸರಕುಗಳೂ ಇರುತ್ತವಷ್ಟೆ. ಅವುಗಳ ಖರೀದಿಯು, ಒಟ್ಟು ಖರೀದಿಯ ೧/೧೦ ಕ್ಕಿಂತ ಹೆಚ್ಚು ಇದ್ದರೆ, ಕೊಡಬೇಕಾದ ಗುತ್ತಿಗೆ ಹಣವನ್ನೂ ನೀವು ಇದಕ್ಕೂ ಕಡಿಮೆ ಮಾಡಿಸಿಕೊಳ್ಳಬಹುದು !

ಸಣ್ಣ ವ್ಯವಹಾರಸ್ಥರಿಗೆ ಈ ರೀತಿಯ ಕರವನ್ನು ಕೊಡೋಣವು ಬಹಳ ಅನುಕೂಲವಾಗಿರುವದರಿಂದ ಇದರ ಪ್ರಯೋಜನವನ್ನು ಪಡೆಯಬೇಕೆಂದು ಸೂಚಿಸುತ್ತೇವೆ. ಇದಕ್ಕೂ ಹಿಂದೆಯೂ ಗುತ್ತಿಗೆ ಹಣದ ಕರದ ಸೌಕರ್ಯವಿತ್ತು. ಆದರೆ ಅದು ಇಷ್ಟು ಸುಲಭವಿರಲಿಲ್ಲ.

ಯಾರು ಸಾಮಾನ್ಯ ಕರವನ್ನೂ ಗುತ್ತಿಗೆ ಹಣದ ರೂಪದಲ್ಲಿ ಕೊಡಬೇಕೆನ್ನುತ್ತಾರೋ ಅವರು ಗಿರಾಕಿಗಳಿಂದ ಸಾಮಾನ್ಯ ಕರವನ್ನು ವಸೂಲು ಮಾಡತಕ್ಕದ್ದಲ್ಲ, ಮಾಡಿದರೆ ಅಪರಾಧವಾಗುತ್ತದೆ [ಸ. ೨೨(ಅ)]

## ಪರಪ್ರಾಂತದ ನಂಬರದಾರರಿಂದ ಖರೀದಿ.

ಈಚೆಗೆ ಎಷ್ಟೋ ಪರಪ್ರಾಂತದ ಖರೀದಿಯ ಪಟ್ಟಿಯಲ್ಲಿ ಮುಂಬಯಿ ಕರವನ್ನು ಹಚ್ಚಿ ಬಂದದ್ದಿರುತ್ತದೆ. ಅದರ ಅರ್ಥವೆಂದರೆ ಅವರು ಪರಪ್ರಾಂತದವರಿದ್ದರೂ, ಮುಂಬಯಿ ಕಾಯದೆಯನ್ವಯ ನೊಂದಾಯಿಸಲ್ಪಟ್ಟವರಿರಲೇಬೇಕು. ಅಂದರೆ ಮಾತ್ರ ಮುಂಬಯಿ ಕರವನ್ನು ಆಕಾರ ಮಾಡಲಿಕ್ಕೆ ಬರುತ್ತದೆ. ಇನ್ನು ಅವರು ಇಂಥ ತಮ್ಮ ವಿಕ್ರಿಯ ಮೇಲೆ, ತಮ್ಮ ರಾಜ್ಯದ ಕರವನ್ನು ಹಾಕಲಿಕ್ಕೆ ಬರುವದಿಲ್ಲ. ಇದು ರಾಜ್ಯ ಘಟನೆಯ ೨೮೬ ನೇ ಕಲಮಿನಿಂದ ದೊರೆತಿರುವಂಥ ಸಾರ್ವತ್ರಿಕ ಸವಲತ್ತು.

ಇಂಥ ಸ್ಥಿತಿಯಲ್ಲಿ ಇಲ್ಲಿಯ ನಂಬರದಾರರಾದ ನಾವು, ಪರಪ್ರಾಂತದ ಮುಂಬಯಿ ಕಾಯದೆಯನ್ವಯ ನಂಬರದಾರರಿಂದ ಮಾಲು ಖರೀದಿಮಾಡಿದಲ್ಲಿ ಆ ಖರೀದಿಯ ಮೇಲೆ ಮೊದಲನೇ ಕರವನ್ನು ಕೊಡುವ ಅಗತ್ಯವಿಲ್ಲ. ಅಂದರೆ ನಮ್ಮ ಪರಪ್ರಾಂತ ಮಾರಾಟಗಾರನ ಮಾರಾಟವು ಮೊದಲನೇ ಕರದಿಂದಮುಕ್ತವಿದೆ. [ಸ.ರೂಲ್ ೫ (೧) ] ಆದರೆ ಮುಂದೆ ನಾವು ನಮ್ಮಮಾರಾಟದ ಮೇಲೆ ಈ ಮೊದಲನೇ ಕರವನ್ನು ಕೊಡಲೇಬೇಕಾಗುತ್ತದೆ— ಈ ಸವಲತ್ತಿನ ಉಪಯೋಗವನ್ನು ಮಾಡಿಕೊಂಡರೆ.

ಇವಲ್ಲದೆ ಸವಲತ್ತಿನ ರೂಲ್ ೫-೧೧ರ ವರೆಗೆ ಕೆಲವು ವಿಶಿಷ್ಟ ಸರಕುಗಳ ಮೇಲೆ, ಕೆಲವು ಖರೀದಿದಾರರಿಗೆ ಮಾಡಿದ ಮಾರಾಟಗಳ ಮೇಲೆ ಖರೀದಿಯ ಕರದಿಂದ, ಮೊದಲಿನ ಕರದಿಂದ, ಅಥವಾ ಸಾಮಾನ್ಯ ಕರದ್ದೋ ಮುಕ್ತತೆ ಇದೆ. ಸಂಬಂಧಪಟ್ಟವರು ಅವುಗಳನ್ನು ವಿವರದಲ್ಲಿ ನೋಡಿಕೊಂಡಿದ್ದರೆ ಒಳ್ಳೆಯದು.

# ೪ ನೇ ಪ್ರಕರಣ

## ಮಾಡಬೇಕಾದ ವಿಧಿಗಳು

ದ್ವಿಮುಖಿ ಕರದ ಪಾತ್ರತೆ, ಆಕರಣೆ ಮತ್ತು ಸೌಲಭ್ಯಗಳನ್ನು ಆಚರಣೆಗೆ ತರುವದಕ್ಕಾಗಿ ನಮ್ಮ ಕರ್ತವ್ಯ ಏನಿದೆಯೆಂಬುದನ್ನು ಈ ಪ್ರಕರಣದಲ್ಲಿ ಹೇಳಬಯಸಿದೆ. ಕಚೇರಿಗೆ ಸಂಬಂಧಪಟ್ಟ ವಿಧಿಗಳ ಉಲ್ಲಂಘನೆಯಿಂದ ಅನವಶ್ಯಕವಾಗಿ ನಮಗೆ ಹಾನಿ ಆಗುವ ಸಂಭವವಿರುತ್ತದೆ. ಆದುದರಿಂದ ವ್ಯಾಪಾರೀ ಬಾಂಧವರು ಇವುಗಳ ಕಡೆಗೂ ವಿಶೇಷ ಗಮನವನ್ನು ಕೊಡಬೇಕಾದದ್ದು ಅನಿವಾರ್ಯವಾಗಿದೆ. ಇದಲ್ಲದೆ, ಈ ಪ್ರಕರಣದಲ್ಲಿ ಕರಾಕರಣೆಯ ಹಿನ್ನೆಲೆಯಾಗಿ ಖರೀದಿಯ, ಸ್ಟಾಕಿನ, ಮತ್ತಿತರ ಲೆಕ್ಕ ಪತ್ರಗಳನ್ನಿಡುವ ವಿಚಾರದಲ್ಲಿಯೂ ನಾಲ್ಕು ಮಾತುಗಳನ್ನು ಹೇಳಬೇಕೆಂದಿದ್ದೇವೆ.

## ನೋಂದಣಿಯ ವಿಚಾರದಲ್ಲಿ

ಎರಡನೇ ಪ್ರಕರಣದಲ್ಲಿ ವಿವರಿಸಿದಂತೆ, ಯಾರು ಕರಪಾತ್ರರಿರುವರೋ ಅವರು, ಒಂದು ತಿಂಗಳೊಳಗಾಗಿ ಎ ಫಾರ್ಮಿನಲ್ಲಿ ಅರ್ಜಿ ಮಾಡಿ ಸರ್ಟಿಫಿಕೇಟನ್ನು ಪಡೆಯಬೇಕು. ಕರವನ್ನು ಮಾತ್ರ, ಗೊತ್ತುಪಡಿಸಿದಷ್ಟು ವ್ಯವಹಾರ ಮಿತಿ ದಾಟಿದ ದಿನದಿಂದಲೇ ಕೊಡುವುದು ಲಾಗೂ ಆಗುತ್ತದೆ. ಇನ್ನು ಕೈಯಲ್ಲಿ ನೋಂದಣಿ ನಂಬರು ಇಲ್ಲದೆ ಇನ್ನೊಬ್ಬರಿಂದ ಕರವನ್ನೆತ್ತಲು ಬರುವಂತಿಲ್ಲವಾದ್ದರಿಂದ, ಕೂಡಲೇ— ಅಂದರೆ ಒಂದು ತಿಂಗಳ ಅವಧಿಯ ದಾರಿ ಕಾಯದೇ— ಅರ್ಜಿ ಕೊಡುವುದು ಉತ್ತಮ.

೧೯೫೩–೫೪ ನೆಯ ಸಾಲಿನಲ್ಲಿ ಖರೀದಿ ಅಥವಾ ಮಾರಾಟವು ರೂ. ೨೫ ಸಾವಿರ ಇಲ್ಲವೆ ರೂ. ೧೦ ಸಾವಿರದ ಗಡುವನ್ನು ದಾಟಿದ್ದರೆ ಅವರಿಗೆ ಎಪ್ರಿಲ್ ೧ನೆಯ ದಿನಾಂಕದಿಂದ ಕರಪಾತ್ರತೆ ಇರುತ್ತದೆ. ಇವರೂ ಎ ಫಾರ್ಮಿನಲ್ಲಿ ಅರ್ಜಿ ಕೊಡುವರಲ್ಲದೆ, ಈಗಾಗಲೇ ನಂಬರು ಇದ್ದ ಹಳಬರೂ ಅದೇ ರೀತಿಯಲ್ಲಿ ಅರ್ಜಿ ಕೊಟ್ಟು ಬೇರೊಂದು ನಂಬರನ್ನು ಪಡೆಯಬೇಕಾಗುತ್ತದೆ.

ಹೊಸ ಕಾಯದೆಯ ಪ್ರಕಾರ ಕರ ಪಾತ್ರತೆ ಇಲ್ಲದ, ಹಳೆಯ ನಂಬರ ದಾರರು ಸಿ ಫಾರ್ಮಿನಲ್ಲಿ ಅರ್ಜಿಮಾಡಿ ಸರ್ಟಿಫಿಕೇಟ, ಲೈಸೆನ್ಸ ಇತ್ಯಾದಿಗಳೆಲ್ಲವನ್ನೂ ಕೂಡಲೇ ಹಿಂತಿರುಗಿಸಬೇಕು.

## ಲೈಸೆನ್ಸ–ಆಥರಾಯಿಜೇಶನ್ನಗಳ ವಿಚಾರದಲ್ಲಿ—

ಸರ್ಟಿಫಿಕೇಟಿನ ಸಂಗಡ ನಿಮಗೆ ಲೈಸೆನ್ಸ ಆಥರಾಯಿಜೇಶನ್ ಸಿಗುವಂತಿದ್ದರೆ ಅವನ್ನೂ ಬೇಗ ತೆಗೆದುಕೊಳ್ಳಬೇಕು. ಸರ್ಟಿಫಿಕೇಟನ್ನು ನೀವು ಪಡೆಯಲೇಬೇಕು; ಲೈಸೆನ್ಸ್–ಆಥರಾಯಿಜೇಶನ್‌ಗಳನ್ನು ನೀವು ಬೇಕಾದರೆ ಪಡೆಯಬಹುದು!

ಲೈಸೆನ್ಸಿಗಾಗಿ ಇ ಫಾರ್ಮಿನಲ್ಲಿಯೂ, ಆಥರಾಯಿಜೇಶನ್ನಿಗಾಗಿ ಜಿ ಫಾರ್ಮಿನಲ್ಲಿಯೂ ಅರ್ಜಿಯನ್ನು ಕೊಡಬೇಕು. ಲೈಸೆನ್ಸನ್ನು ಪಡೆಯಲಿಕ್ಕೆ ನೀವು ನಂಬರದಾರರಿಗೆ ಮತ್ತು ಪರಪ್ರಾಂತಕ್ಕೆ ಮಾಡಿದ ಒಟ್ಟು ವಾರ್ಷಿಕ ವ್ಯವಹಾರವು ರೂ. ೫೦,೦೦೦ ವನ್ನು ಮಿಕ್ಕಿರಬೇಕು. ಈ ವ್ಯವಹಾರದಲ್ಲಿ ಸಂಪೂರ್ಣ ಕರಮುಕ್ತ ಸರಕು ಸೇರಿಕೊಂಡರೂ ನಡೆಯುತ್ತದೆ. ಮುಖ್ಯ ನೀವು ದೊಡ್ಡ ಪ್ರಮಾಣದ ಠೋಕದಾರರು ಎಂದು ಸಿದ್ಧವಾಗಬೇಕು. ಆಥರಾಯಿಜೇಶನ್ನಿಗೆ, ಪರಪ್ರಾಂತಕ್ಕೆ ಸ್ವತಃ ಇಲ್ಲವೆ ಇನ್ನೊಬ್ಬರ ಮುಖಾಂತರ ಮಾಡಿದ ಮಾರಾಟದ ಕಿಮ್ಮತ್ತು ವರ್ಷಕ್ಕೆ ೫೦ ಸಾವಿರದ್ದಾಗಬೇಕು.

ಈ ಐವತ್ತು ಸಾವಿರದ ಲೆಕ್ಕವು ಕಳೆದ ವರ್ಷದಲ್ಲಿ ಸ್ವಲ್ಪದರಲ್ಲಿ ತಪ್ಪಿದ್ದರೆ, ಚಾಲ್ತಿ ವರ್ಷಕ್ಕೆ ಅಂಥ ಲೆಕ್ಕವನ್ನು ಮೊದಲಿಂದ ಇಟ್ಟುಕೊಂಡು ನಂತರ ಇ ಅಥವಾ ಜಿ ಫಾರ್ಮಿನಲ್ಲಿ ಅರ್ಜಿ ಮಾಡಬೇಕು.

ಇನ್ನು ತೀರ ದೊಡ್ಡ ಹೊಸದಾಗಿ ಅಂಗಡಿಯನ್ನು ಸುರುವು ಮಾಡಿ ಒಂದೆರಡು ಅಥವಾ ಏಳೆಂಟು ತಿಂಗಳುಗಳಲ್ಲಿಯೇ ಐವತ್ತು ಸಾವಿರದ ಗಡುವನ್ನು ತಲುಪಿದ್ದರೆ ನಿಮಗೆ ಇದ್ದಕ್ಕಿದ್ದಂತೆ ಲೈಸೆನ್ಸ ಅಥವಾ ಆಥರಾಯಿಜೇಶನ್ ಸಿಗುವದಿಲ್ಲ. ೧೦ ಸಾವಿರ ರೂ.ಗಳಿಗೆ ಜಾಮೀನು ಕೊಡಬೇಕಾಗುವದು. ನೋಂದಣಿ ನಂಬರನ್ನು ಪಡೆದುಕೊಂಡು ೧೨ ತಿಂಗಳುಗಳು

ಕಳೆದ ಮೇಲೆ ಯಥಾಪ್ರಕಾರ ಇತರರಂತೆ ಲೈಸೆನ್ಸದಾರನು ಹಳಬನಾಗುತ್ತಾನೆ. ಆನಂತರ ಅವನಿಂದ ಜಾಮೀನಿನ ಅಗತ್ಯವು ಉಳಿಯುವದಿಲ್ಲ.

ಸದ್ಯ ಜಾಮೀನನ್ನು ಬೇಕಾದರೆ ಕೊಡುತ್ತೇನೆ. ನನ್ನ ಆ ರೀತಿಯ ವಿಕ್ರಿಯು ಮುಂದೆ ೫೦ ಸಾವಿರವನ್ನು ಖಾತ್ರಿಯಾಗಿ ಮೀರುತ್ತದೆ ಎಂದು ಹೇಳಿದರೆ, ಹಾಗೇನು ಲೈಸೆನ್ಸ ಅಥವಾ ಆಥರಾಯಿಜೇಶನ್ ಸಿಗುವದಿಲ್ಲ. ಮೋಜು ಎಂದರೆ, ಆಥರಾಯಿಜೇಶನ್ ಸಿಕ್ಕವನಿಗೆ ಲೈಸೆನ್ಸ ತಾನಾಗಿಯೇ ದೊರೆಯುವದು

ಇವುಗಳ ಉಪಯೋಗವನ್ನು ಕುರಿತು ಇಲ್ಲಿ ಇನ್ನೊಮ್ಮೆ ಸಂಗ್ರಹವಾಗಿ ಹೇಳಿಬಿಡುತ್ತೇವೆ. ಇವೆರಡೂ ಖರೀದಿಯ ಕಾಲಕ್ಕೆ ಉಪಯೋಗವಾಗುವಂತಹವು. ಆಥರಾಯಿಜೇಶನ್ ಇದ್ದರೆ, ನಮ್ಮ ಖರೀದಿಯ ಮೇಲೆ ಮೊದಲನೇ ಕರವು ಬೀಳುವದಿಲ್ಲ. ಅದಕ್ಕಾಗಿ ಆ ಮಾಲನ್ನು ಪರಪ್ರಾಂತಕ್ಕೆ ನಾವಾಗಲೀ, ಇನ್ನೊಬ್ಬ ಸಾದಾ ನಂಬರುದಾರನ ಮುಖಾಂತರವಾಗಲೀ ಕಳಿಸುವದಾಗಿ ಲೇಖೀ ಕೊಟ್ಟಿರುತ್ತೇವೆ

ಲೈಸೆನ್ಸ ಇದ್ದರೆ ಖರೀದಿಯ ಕಾಲಕ್ಕೆ ಸಾಮಾನ್ಯ ಕರವು ಬೀಳುವದಿಲ್ಲ. ಈ ಖರೀದಿಯು ಪುನಃ ಮಾರಾಟಕ್ಕಾಗಿಯಾದರೂ ಇರಬಹುದು. ಉತ್ಪಾದನೆಗಾದರೂ ಇರಬಹುದು. ಉತ್ಪಾದನೆಯ ಮಟ್ಟಿಗೆ ಬಿ ಕೋಷ್ಟಕದ ೧-೧೮ ರ ವರೆಗಿನ ಸರಕುಗಳು ಕರಮುಕ್ತವಾಗಿ ಲೈಸೆನ್ಸದಾರನಿಗೆ ದೊರೆಯುವದಿಲ್ಲ.

## ಖರೀದಿ ಕರದ ಆಯ್ಕೆ

ಬಿನ್ ನಂಬರದಾರರ ಕಡೆಯಿಂದ ನಮ್ಮ ಖರೀದಿ ಇದ್ದರೆ ಅದರ ಮೇಲೆ ಖರೀದಿ ಕರ ಇಲ್ಲವೆ ವಿಕ್ರಿ ಕರ ಲಾಗೂ ಆಗುವದಷ್ಟೆ. ಇವುಗಳಲ್ಲಿ ಒಂದನ್ನು ಆಯ್ದುಕೊಳ್ಳಬೇಕಾದ ಪ್ರಸಂಗವಿದೆ. ಈ ಬಗ್ಗೆ ನಾವು ಏನೂ ಹೇಳದಿದ್ದರೆ ಖರೀದಿ ಕರವನ್ನೇ ಕೊಡಬೇಕಾಗಿ ಬರುತ್ತದೆ. ಏಕೆಂದರೆ ಮೊದಲು ಖರೀದಿ ಆನಂತರ ಅದರ ಮಾರಾಟವಲ್ಲವೆ. ಈ ಆಯ್ಕೆಗಾಗಿ ನಾವು ನಂಬರು ಪಡೆದ ೩ ತಿಂಗಳೊಳಗಾಗಿ ೧ ನೇ ಫಾರ್ಮಿನಲ್ಲಿ ಅರ್ಜಿ

ಮಾಡಬೇಕು. ಒಮ್ಮೆ ಹೀಗೆ ಆಯ್ಕೆ ಮಾಡಿದ ಮೇಲೆ ಅದನ್ನು ಬದಲು ಮಾಡಲಿಕ್ಕೆ ಬರುವದಿಲ್ಲ.

## ಕರಮುಕ್ತತೆಯ ಬೇಡಿಕೆಯ ವಿಚಾರದಲ್ಲಿ

ಕರ ಮುಕ್ತತೆಯನ್ನು ಪಡೆಯುವಾಗ ಮುಖ್ಯವಾಗಿ ಬೇಕಾದದ್ದು ಖರೀದಿಯ ವಿವರಗಳು ಮತ್ತು ಖರೀದಿ ಪಟ್ಟಿಗಳು. ಇವೆರಡನ್ನು ಈ ಕೂಡಲೇ ವಿವರಿಸಲಾಗುವದು. ಇವನ್ನು ಬಿಟ್ಟು ಇತರ ಒಂದೆರಡು ವಿಧಿಗಳೆಂದರೆ--

೧. ಪರ ಪ್ರಾಂತಕ್ಕೆ ಕಳಿಸಿದ ಸರಕಿನ ವಿಚಾರದಲ್ಲಿ ಇಲ್ಲಿಂದ ಕಳಿಸಿದ ಬಗ್ಗೆ, ಅಲ್ಲಿ ಮುಟ್ಟಿದ ಬಗ್ಗೆ ಸಾಮಾನ್ಯವಾಗಿ ಪುರಾವೆಗಳು ಬೇಕು.

೨. ಗುತ್ತಿಗೆ ಹಣದ ಸಾಮಾನ್ಯಕರ ಕೊಡುವುದರಲ್ಲಿ, ೭ನೇ ಫಾರ್ಮಿನೊಳಗೆ ಬೇಕಾದಾಗ ಅರ್ಜಿ ಮಾಡಬೇಕು. ಪರವಾನಿಗೆ ಸಿಕ್ಕಮೇಲೆ ೮ನೇ ಫಾರ್ಮಿನಲ್ಲಿ ಗುತ್ತಿಗೆ ಹಣದ ಲೆಕ್ಕದ ಹೇಳಿಕೆಯನ್ನು ಪ್ರತಿ ೩ ತಿಂಗಳಿಗೆ ಕೊಡಬೇಕಾಗುವದು. ಪ್ರತಿ ವರ್ಷಕ್ಕೆ ಈ ಪರವಾನಿಗೆಯನ್ನು ಹೊಸದಾಗಿಸಿಕೊಳ್ಳಬೇಕಾಗುತ್ತದೆ.

## ಖರೀದಿಯ ವಿಚಾರದಲ್ಲಿ

ದ್ವಿಮುಖಿ ಕಾಯದೆಯಲ್ಲಿ ಖರೀದಿಯ ಮಹತ್ವವು ಎಷ್ಟೊಂದು ಇದೆಯೆಂಬುದು ಇಷ್ಟರ ವರೆಗಿನ ವಾಚನದಿಂದ ನಿಮಗೆ ಚೆನ್ನಾಗಿ ಆಗಿರಲಿಕ್ಕೆ ಸಾಕು. ಮಾರಾಟದಂತೆ ಖರೀದಿಯ ಪ್ರತಿಯೊಂದು ವಿವರಗಳು ಇನ್ನು ಮೇಲೆ ಬೇಕಾಗುವವು. ತ್ರೈಮಾಸಿಕ ರಿಟರ್ನ ತುಂಬುವಾಗ ಖರೀದಿಗೂ ಸ್ಥಾನವಿದೆ.

ಅದರಲ್ಲಿ ಮೊದಲು ಎಲ್ಲ ಖರೀದಿ ವ್ಯವಹಾರವನ್ನು ಕೊಡಬೇಕು. ಅಲ್ಲಿಂದ ಎ ಕೋಷ್ಟಕದ ಮತ್ತು ನಂಬರದಾರರಿಂದ ಮಾಡಿದ ಖರೀದಿಯನ್ನು ವಜಾ ಮಾಡಬೇಕು. ಅಲ್ಲಿಂದ ಉಳಿದದ್ದರ ಮೇಲೆ ಖರೀದಿ ಕರವು ಲಾಗೂ ಆಗುವದೆಂದಾಯಿತು. ಈ ಖರೀದಿ ಕರದ ವಿಚಾರದಲ್ಲಿ ಮತ್ತು ಇತರ ಅನು

ಕೂಲತೆಗಳಿಗಾಗಿ ಒಂ[illegible]ಾಳೆಯ ನಮೂನೆಯನ್ನು ಆಸೇ ಪರಿಶಿಷ್ಟದಲ್ಲಿ ಕೊಡಲಾಗಿವೆ.

ಮೇಲಿನವರಲ್ಲಿ ಖರೀದಿಯ ವಿವರಗಳ ನೇರವಾದ ಬೇಡಿಕೆ ಇದ್ದರೆ, ಮೊದಲ ಕರವನ್ನು ಲಾಗುಮಾಡುವಾಗ, ಈಮಾಲು ಇಂಥ ನಂಬರದಾರನಕಡೆಯಿಂದ ಕೊಂಡದ್ದು ಎಂದು ಸಿದ್ಧಮಾಡಿ ತೋರಿಸುವಷ್ಟು ನಮ್ಮ ಖರೀದಿಯ ವಿವರಗಳು ಸಮರ್ಥವಿರಬೇಕಾಯಿತು! ಅಧಿಕಾರಿಯನ್ನು ಸಮಾಧಾನ ಪಡಿಸುವಷ್ಟು ಪುರಾವೆಗಳನ್ನು ಒದಗಿಸುವುದು ನಮ್ಮ ಕರ್ತವ್ಯವೇ ಅಂತೆ. [ಸ. ರೂಲ್ ೧೭]. ಇದೇ ಖರೀದಿಯ ಮೇಲಿನದೇ ಈ ವಿಕ್ರಿ ಎಂದು ಆದೆಂತು ಸಿದ್ಧಮಾಡಿ ತೋರಿಸಲು ಸಾಧ್ಯವಾಗುತ್ತದೋ, ಮುಂದೆ ನೋಡಬೇಕು ಸದ್ಯಕ್ಕಂತೂ ವಿವರಗಳು ಆಗತ್ಯವೆಂದಂತಾಯಿತು.

ಖರೀದಿಯ ಕೆಲಸ ಇಲ್ಲಿಗೇ ಮುಗಿಯಲಿಲ್ಲ. ನಾವು ನಮ್ಮ ಖರೀದಿಯ ಕಾಲಕ್ಕೆ ಕೊಟ್ಟ ಸಾಮಾನ್ಯ ಕರ, ಮೊದಲನೇ ಕರಗಳನ್ನು ಪರತು ಅಥವಾ ವಜಾ ಹಾಕಬೇಕಾದರೆ, ಅವುಗಳ ಪಟ್ಟಿ ಸಹಿತ ವಿವರಗಳು ಬೇಕು ಅಷ್ಟೇ ಅಲ್ಲ, ಪ್ರತಿ ಮೂರು ತಿಂಗಳಿಗೊಮ್ಮೆ ೯ನೆಯ ಫಾರ್ಮಿನಲ್ಲಿ ಅದರ ಪ್ರತ್ಯೇಕ ತಪಶೀಲಿನ ಪಟ್ಟಿಯನ್ನು ಕಳಿಸಬೇಕು. ಮತ್ತು ಅದೇ ಮಾಲಿನ ವಿಕ್ರಿ ಆಗಿದೆಯೆಂದು ಸಿದ್ಧ ಮಾಡಿಕೊಟ್ಟು ಆ ಹಣವನ್ನು ಮರಳಿ ಪಡೆಯಬೇಕು.

ಅದರಂತೆ ಉತ್ಪಾದಕರು ಸರಕಿನ ಖರೀದಿಯನ್ನೂ, ಅದನ್ನು ಸರಕಿನ ತಯಾರಿಕೆಯಲ್ಲಿ ಉಪಯೋಗವಾಯಿತೆಂಬುದನ್ನೂ ತೋರಿಸಿ ಕೊಡಲಿಕ್ಕೆ ಬೇಕಾಗುವ ವಿವರಗಳೂ ನಮ್ಮಲ್ಲಿರಬೇಕು. ಸಾಮಾನ್ಯ ಕರದ ಬದಲು ಗುತ್ತಿಗೆ ಹಣವನ್ನು ಕೊಡುವ ಕಾಲಕ್ಕೆ ಬಿನ್ ನಂಬರದಾರರಿಂದ ಮಾಡಿದ ಖರೀದಿಯ ವಿವರಗಳು ಬೇಕಾಗುತ್ತವೆ.

ಕೊನೆಯದಾಗಿ ಖರೀದಿ ಪಟ್ಟಿ, ಅದರಲ್ಲಿ ಕೊಟ್ಟ ಕರದ ಪ್ರತ್ಯೇಕ ಉಲ್ಲೇಖವಿಲ್ಲದೆ ಯಾವ ಕರವೂ ಪರತು ಸಿಗುವದಿಲ್ಲವಾದ್ದರಿಂದ ನಮ್ಮ ಪ್ರತಿಯೊಂದು ಖರೀದಿಗೆ ಪಟ್ಟಿಯನ್ನು ದೊರಕಿಸಿಕೊಳ್ಳಬೇಕಾಧುದು, ಕರವೆಂದು ಕೊಡದಿದ್ದರೂ ಆ ರಕಮನ್ನು ಬೇರೆಯಾಗಿ ಕಾಣಿಸಿಕೊಳ್ಳಬೇಕಾದದ್ದೂ ಅಗತ್ಯವಾಗುತ್ತದೆ.

## ಸ್ಟಾಕಿನ ವಿಚಾರದಲ್ಲಿ

ಈ ತಿದ್ದುಪಡಿ ಕಾಯದೆ ಅಮಲಿನಲ್ಲಿ ಬರುವ ಪ್ರಾರಂಭಕ್ಕೆ ಎಲ್ಲರಲ್ಲಿಯೂ ಹಳೆಯ ಸ್ಟಾಕ್ ಉಳಿದೇ ಇರುತ್ತದೆ. ಕಾಯದೆ ಅಥವಾ ರೂಲ್ಸಗಳಲ್ಲಿ ಎಲ್ಲಿಯೂ ಸ್ಟಾಕಿನ ವಿವರಗಳು ಬೇಕೆಬೇಕು ಎಂದು ಹೇಳಿಲ್ಲ. ಹಿಂದೆ ಹೇಳಿದಂತೆ ಬಹುಮುಖೀ ಕರದ ರಿಫಂಡ ಬೇಕಾಗಿದ್ದರೆ, ಮಾರಾಟ ಹಳೆಯ ಮಾಲಿನದಲ್ಲ, ಹೊಸದಾಗಿ ಖರೀದಿ ಮಾಡಿದ್ದು ಎಂದು ಸಿದ್ಧಮಾಡಬೇಕಾದರೆ ಸ್ಟಾಕಿನ ವಿವರಗಳು ಅಗತ್ಯವಾಗಿವೆ.

ಬಹುಮುಖೀ ಕರದ ರಿಫಂಡ್ ಬೇಕಾದವರು ಮೇ ೩೧ರೊಳಗಾಗಿ ೧೧ನೇ ಫಾರ್ಮಿನಲ್ಲಿ ಸ್ಟಾಕಿನ ತಪಶೀಲುಗಳನ್ನು ಕೊಡಬೇಕು ಎಂದು ವಿಧಿಸಲಾಗಿದೆ. ಆ ಕಾರಣ ವ್ಯವಹಾರದ ಸ್ವರೂಪ ಏನೆ ಇರಲಿ, ಸ್ಟಾಕನ್ನು ತೆಗೆದು ವಿವರಗಳನ್ನಿಟ್ಟುಕೊಳ್ಳಬೇಕೆಂದು ಸೂಚಿಸಲಾಗಿದೆ.

## ಲೆಕ್ಕ ಪತ್ರಗಳು

ಕಾಯದೆಯಲ್ಲಿ ಪ್ರತ್ಯೇಕವಾಗಿ ಕರಭಾರವು ಹೆಚ್ಚಿಗೆ ಇರದಿದ್ದರೂ, ಲೆಕ್ಕಪತ್ರಗಳ ಹೊರೆ ಮಾತ್ರ ಬಹು ಹೆಚ್ಚಿನದಾಯಿತು. ಅದು ಹೊರೆಯೆಂಬುದಿರಲಿ ಇಡುವುದಾದರೂ ಹೇಗೆ ಎಂಬುದು ಎಲ್ಲರನ್ನೂ ಬಾಧಿಸುತ್ತದೆ. ಈ ಬಗ್ಗೆ ಕೆಲವೊಂದು ಸಾಮಾನ್ಯ ಸೂಚನೆಗಳನ್ನು ಮಾತ್ರ ಮಾಡಬಹುದು.

ಈಗ ನಾವು ಬರೆಯುವ ಖಾತೆ, ಕಿರ್ದಿ, ನೋಂದುಗಳಲ್ಲಿ ಹೆಚ್ಚಿನ ಬದಲಾವಣೆಯನ್ನು ಮಾಡುವದಕ್ಕಿಂತ, ಕರಾಕರಣೆಗೆ ಅನುಕೂಲವಾಗುವಂತೆ ಬೇರೆ ರಜಿಸ್ಟರುಗಳನ್ನು ಇಡುವದು ಒಳಿತು. ಅವುಗಳ ಸಹಾಯದಿಂದ ತ್ರೈಮಾಸಿಕ ಪತ್ರಕವನ್ನು ತುಂಬುವುದಕ್ಕೆ ಅನುಕೂಲವಾಗುವಂತಿರಬೇಕು. ಅಂಥ ಒಂದು 'ಸೇಲ್ಸ ರಜಿಸ್ಟರಿ'ನ ನಮೂನೆಯನ್ನು ೩ನೇ ಪರಿಶಿಷ್ಟದಲ್ಲಿ ಕೊಡಲಾಗಿದೆ.

ಖರೀದಿಯ ವಿವರಗಳು ಬೇಕಾಗುವದರಿಂದ ಅದಕ್ಕೊಂದು 'ಖರೀದಿ ದಾಖಲೆ' ಯನ್ನು ಬೇರೆಯಾಗಿಯೇ ಇಡಬೇಕು. ಸುರುವಾತಿಗೆ ಮತ್ತು ಪ್ರತಿ ವರ್ಷದ ಕೊನೆಗೆ ಸ್ಟಾಕನ್ನೂ ಅದರಲ್ಲಿ ಕಾಣಿಸಬೇಕು ಅದರ

ನಮೂನೆಯನ್ನು ೪ ಪರಿಶಿಷ್ಟದಲ್ಲಿ ಕೊಟ್ಟಿದೆ. ಇವೆರಡರ ಸಹಾಯದಿಂ ರಿಟರ್ನನ್ನು ತುಂಬಲು ಬಹಳ ಸುಲಭವಾಗುತ್ತದೆ. ಪ್ರತಿಯೊಬ್ಬ ವ್ಯಾಪಾರ ಸ್ಥನಿಗೆ ಈ ಸೇಲ್ಸ ರಜಿಸ್ಟರ್, ಮತ್ತು ಖರೀದಿ ರಜಿಸ್ಟರ್ ಇ॰ ಅಗತ್ಯ ವಾಗಿವೆ.

ಉತ್ಪಾದಕರಾದವರು, ಕಚ್ಚಾ ಸಾಮಗ್ರಿಯ ಖರೀದಿಯ ತಪಶೀಲು, ಅದು ಉತ್ಪಾದನೆಗೆ ಉಪಯೋಗಿಸಲ್ಪಟ್ಟ ದಿನಾಂಕ, ಮಾರಾಟವಾದ ಅಂದಾಜ ಅವಧಿ ಇವನ್ನು ತೋರಿಸುವ ಒಂದು ದಾಖಲೆಯನ್ನು ಪ್ರತ್ಯೇಕ ವಾಗಿ ಇಟ್ಟುಕೊಳ್ಳಬೇಕಾಗುವದು.

ವ್ಯವಹಾರ ಸಣ್ಣದೇ ಆಗಿರಲಿ ಪಾವತಿ ಇಲ್ಲದೆ ವ್ಯವಹಾರ ಮಾಡು ವದು ಕಠಿಣವಾಗುತ್ತದೆ. ಅದರಲ್ಲಿ ಕರಗಳನ್ನು ಬೇರೆಯಾಗಿ ಕಾಣಿಸುವುದು ನೆಟ್ಟಗೆ. ಹಳೆಯ ಸ್ಟಾಕಿನ ಮಾರಾಟಕ್ಕೆ ಆ ಸ್ಟಾಕು ತೀರುವತನಕ ಬೇರೊಂದು ಪಾವತಿ ಪುಸ್ತಕ ಇಟ್ಟರೆ ಹೆಚ್ಚು ಅನುಕೂಲ. ಅಥವಾ ಹೊಸ ದಕ್ಕಾದರೂ ಹಾಗೆ ಮಾಡಬೇಕು.

ಸ್ಟಾಕನ್ನು ನಾವು ಹೆಚ್ಚಾಗಿ ದೀಪಾವಳಿಗೆ ತೆಗೆಯುತ್ತೇವೆ. ಯಾವದೇ ವರ್ಷದ ಎಪ್ರಿಲ್ ೧ಕ್ಕೆ ಸ್ಟಾಕಿನ ವಿವರಗಳು ಅಗತ್ಯವಾಗುವದರಿಂದ, ಆ ತೇದಿಯ ಎಡಬಲಕ್ಕೆ ಬರುವ ಯುಗಾದಿಯ ದಿವಸಕ್ಕೆ ಕರ್ನಾಟಕಸ್ಥರು ಲೆಕ್ಕ ಪತ್ರದ ಕೊನೆಯ ದಿನವನ್ನಾಗಿ ಮಾಡಿಕೊಳ್ಳಲು ಬರುತ್ತಿದ್ದರೆ ವಿಚಾರ ಮಾಡಬೇಕು. ಅದರಿಂದ ಅನವಶ್ಯಕವಾಗಿ ಹೆಚ್ಚಿನ ಕರಭಾರ ಬೀಳುವ ಸ್ಥಿತಿ ಯಿದ್ದರೆ, ತಪ್ಪಬಹುದು. ಇನ್‌ಕಂ ಟ್ಯಾಕ್ಸಿನ ಲೆಕ್ಕಕ್ಕೂ ಅನುಕೂಲವಾಗು ವದು.

## ಸರ್ಟಿಫಿಕೇಟುಗಳು

ಈ ಪುಸ್ತಕದಲ್ಲಿ ಹಲವು ಫಾರ್ಮುಗಳ ಮತ್ತು ಸರ್ಟಿಫಿಕೇಟುಗಳ ಉಲ್ಲೇಖ ಬಂದಿದೆ ಫಾರ್ಮುಗಳು ಹೆಚ್ಚಾಗಿ ಮಾರಾಟಕರ ಕಚೇರಿಗಳಲ್ಲಿ ಸಿಗುತ್ತವೆ. ಅಗತ್ಯವಿರುವ ಕೆಲವು ಸರ್ಟಿಫಿಕೇಟುಗಳನ್ನು ಮಾತ್ರ ೫ನೇ ಪರಿಶಿಷ್ಟದಲ್ಲಿ ಕೊಡಲಾಗಿದೆ. ದಯಮಾಡಿ ನೋಡಿಕೊಳ್ಳಬೇಕು.

# ೫ನೇ ಪ್ರಕರಣ

## ಅವರವರ ವ್ಯಾಪಾರದ ಸುಖದುಃಖ

ಇಷ್ಟರವರೆಗೆ ಕಾಯದೆ ದೃಷ್ಟಿಯಿಂದ ಮತ್ತು ಎಲ್ಲರಿಗೂ ಲಾಗೂ ಆಗುವಂತಹ ಮಾತುಗಳನ್ನು ಹೇಳಲಾಯಿತು. ಆದರೆ ನಮ್ಮ ನಮ್ಮ ವ್ಯವಹಾರದಲ್ಲಿ ಇವರ ಪರಿಣಾಮವೇನು, ನಾವೆಷ್ಟು ಕರಕೊಡಬೇಕಾದೀತು, ನಮ್ಮ ವ್ಯವಹಾರದಲ್ಲಿ ಬೇರೆ ಸವಲತ್ತುಗಳೇನಾದರೂ ಇವೆಯೇ ಎಂಬು ದನ್ನು ಈಗ ನೋಡೋಣ-

ಕಾಯದೆಯಲ್ಲಿ ಹೇಳಿದಂತೆಯೇ ನಮ್ಮ ವ್ಯವಹಾರವು ಮೂರು ಬಗೆಯದಷ್ಟೆ

೧. ಪರಪ್ರಾಂತ್ಯ ವ್ಯವಹಾರವುಳ್ಳವರು.

೨. ಉತ್ಪಾದಕರು.

೩. ಪುನರ್ಮಾರಾಟಗಾರರು—ಠೋಕ ಮತ್ತು ಕಿರುಕಳ.

ಇದೇ ಕ್ರಮವನ್ನನುಸರಿಸಿ ಇಲ್ಲಿ ೧೧ ರಹಾರದ ನಮೂನೆ ಗಳನ್ನು ತೆಗೆದುಕೊಂಡು ಸ್ವಲ್ಪದರಲ್ಲಿ ವಿವೇಚನೆ ಮಾಡಲಾಗಿದೆ.

### ಪರಪ್ರಾಂತ್ಯ ವ್ಯವಹಾರ.

ಮುಂಬಯಿ ಬಿಟ್ಟು ಪರಪ್ರಾಂತಕ್ಕೆ ಸರಕನ್ನು ಕಳಿಸುವವರೂ, ಪರ ಪ್ರಾಂತದಿಂದ ತರಿಸುವವರೂ ಇದರಲ್ಲಿ ಬರುತ್ತಾರೆ ಪರಪ್ರಾಂತದಿಂದ ಒಂದು ವರ್ಷಕ್ಕೆ ೨॥ ಸಾವಿರದಷ್ಟು ಮಾಲನ್ನು ನೀವು ತರಿಸಿದವರಾದರೆ, ವರ್ಷಕ್ಕೆ ೧೦ ಸಾವಿರದ ಖರೀದಿ ಅಥವಾ ವಿಕ್ರಿಯಾದೊಡನೆ ನೋಂದಣಿ ಸರ್ಟಿಫಿಕೇ ಟನ್ನು ಪಡೆಯಬೇಕಾಗುವದು. ಹೀಗೆ ನಂಬರುದಾರರಾಗಿ ಪರರಾಜ್ಯದಿಂದ ಮಾಲು ತರಿಸಿದಲ್ಲಿ ಒಂದಿಲ್ಲೊಂದು ರೀತಿಯಿಂದ ಕರಭಾರವು ನಿಮಗೆ ಬೀಳು ವದು.

ಸಾಮಾನ್ಯವಾಗಿ ನೀವು ಹೀಗೆ ತರಿಸಿದ ಮಾಲಿಗೆ ಖರೀದಿ ಕರವನ್ನು ಕೊಡಬೇಕಾಗುವದು. ಪರಪ್ರಾಂತದಲ್ಲಿದ್ದೂ, ನಿಮ್ಮ ಮಾರಾಟದಾರನಿಗೆ

ಮುಂಬಯಿ ನೋಂದಣಿ ನಂಬರು ಇರುವ ಸಂಭವವುಂಟು. ಅಂಥ ಪ್ರಸಂಗ ದಲ್ಲಿ ನೀವು ೨ನೇ ಫಾರ್ಮಿನಲ್ಲಿ ಸರ್ಟಿಫಿಕೇಟನ್ನು ಕೊಟ್ಟು ಮೊದಲನೇ ಕರ ವನ್ನು ತಪ್ಪಿಸಿಕೊಳ್ಳಬಹುದು. ಆದರೆ ಮುಂದೆ ನಿಮ್ಮ ವಿಕ್ರಿಯ ಮೇಲೆ ನೀವು ಅದೇ ಕರವನ್ನು ಕೊಡಲೇಬೇಕಾಗುವದು.

ಮಹತ್ವದ ಮಾತೆಂದರೆ, ನಿಮಗೆ ಪರಪ್ರಾಂತದಿಂದ ನೇರವಾಗಿ ಸರಕು ಬಂದಲ್ಲಿ, ಅದರ ಮೇಲೆ ಆ ಪರಪ್ರಾಂತದ ಕರವನ್ನು ಆಕಾರಮಾಡಲು ಬರುವದಿಲ್ಲ. ನಮ್ಮ ರಾಜ್ಯಘಟನೆಯಲ್ಲಿಯೇ ಇಂಥ ಮುಕ್ತತೆಯನ್ನು ಹೇಳಿದೆ. ನಿಮ್ಮ ಮಾರಾಟದಾರನು ಇಂಥ ವ್ಯವಹಾರದ ಮೇಲೆ ಮುಂಬೈ ಕರವನ್ನು ಮಾತ್ರ ಹಾಕಬಲ್ಲನು.

ಅದೇ ನಿಯಮದನ್ವಯ ನೀವೇ ಪರಪ್ರಾಂತಕ್ಕೆ ನೇರವಾಗಿ ಮಾಲನ್ನು ಕಳಿಸಿದರೆ ಯಾವದೇ ಬಗೆಯ ಮುಂಬೈ ಕರವು ಇಲ್ಲ.

ಪರಪ್ರಾಂತಕ್ಕೆ ನೀವು ಬಹಳಷ್ಟು ಮಾಲನ್ನು ರವಾನಿಸುವವರಾಗಿದ್ದರೆ ಕೂಡಲೇ 'ಆಥರಾಯಿಝೇಶನ್' ಮತ್ತು ಅದರಿಂದ ಅನಾಯಾಸವಾಗಿ ಸಿಗುವ ಲೈಸೆನ್ಸನ್ನು ನೀವು ಪಡೆದುಕೊಳ್ಳಬೇಕು. ಅವು ಇದ್ದಲ್ಲಿ ನಿಮ್ಮ ಖರೀದಿಯ ಮೇಲೆ ಯಾವ ಕರವೂ ಬೀಳುವದಿಲ್ಲ. ಆಥರಾಯಿಝೆಶನ್ನಿನ ಮೇಲೆ ಕೊಂಡ ಮಾಲನ್ನು ನೀವು ಇನ್ನೊಬ್ಬ ನಂಬರುದಾರನ ಮುಖಾಂತರ ಕಳಿಸಿದರೂ ನಡೆಯುತ್ತದೆ. ಆಥರಾಯಿಝೇಶನ್ನಿನ ಬಲದ ಮೇಲೆ ಕೊಂಡ ಮಾಲು ೬ ತಿಂಗಳು, ಅತಿ ಹೆಚ್ಚೆಂದರೆ ೯ ತಿಂಗಳೊಳಗಾಗಿ ನೀವು ಕಳಿಸದಿದ್ದರೆ, ಅದರಮೇಲೆ ಖರೀದಿ ಕರವು ಬೀಳುತ್ತದೆ.

ನೀವು ಉತ್ಪಾದಕರಿದ್ದು ಸಿದ್ಧ ಸರಕನ್ನು ಪರಪ್ರಾಂತಕ್ಕೆ ಕಳಿಸುತ್ತೀರಿ. ನಿಮ್ಮ ಕಚ್ಚಾ ಮಾಲಿನ ಮೇಲೆ ಬಿದ್ದ ಪ್ರಾರಂಭದ ಕರ ಮತ್ತು ೧-೧೮ರ ವರೆಗೆ ಕೊಟ್ಟ ಸಾಮಾನ್ಯ ಕರವು ನಿಮಗೆ ಪರತು ಸಿಗುವದಷ್ಟೆ. ಆ ಮಾಲನ್ನು ನೀವು ಪರಪ್ರಾಂತಕ್ಕೆ ಕಳಿಸಿದಲ್ಲಿ ಆ ಕಿಮ್ಮತ್ತಿನ ಮೇಲೆ ರೂ. ಗೆ ೦—೦—೩ ಯಂತೆ ಲೆಕ್ಕ ಹಿಡಿದಲ್ಲಿ ಅಷ್ಟೊಂದು ರಕಮು ನಿಮಗೆ ಪರತು ಸಿಗುವದಿಲ್ಲ.

## ದಲಾಲರು

ಇತ್ತಕಡೆಯ ಭಾಗದ ವ್ಯಾಪಾರದ ಜೀವನಾಡಿಯೆಂದರೆ ದಲಾಲಿಯದು. ಹೆಚ್ಚಿನ ಠೋಕ ವ್ಯಾಪಾರವು ದಲಾಲನ ಮುಖಾಂತರವೇ ನಡೆಯಬೇಕು. ರೈತನಿಗೆ ತನ್ನ ಮಾಲು ಸಾಗಿಸಬೇಕಾದರೆ ದಲಾಲನೇ ಬೇಕು ಒಂದು ದೃಷ್ಟಿಯಲ್ಲಿ ದಲಾಲನೇ ವ್ಯಾಪಾರ ಮಾಡುವದಿಲ್ಲವಾದರೂ, ರೈತನ ಮಾಲನ್ನು ಅವನು ಆಸಾಮಿಗೆ ಕೊಡಿಸಿದ್ದಾದರೆ, ರೈತನಿಂದ ಅವನ ಖರೀದಿಯಾದಂತೆಯೂ ಆಸಾಮಿಗೆ ಅವನ ಮಾರಾಟವಾದಂತೆಯೂ ತಿಳಿಯಲಾಗುತ್ತದೆ. ಇವರ ಪರಿಣಾಮವು ಮಾತ್ರ ತುಸು ಗಂಭೀರವಾದುದು. ರೈತನಿಗಿಂತೂ ನಂಬರು ಇರುವದಿಲ್ಲ. ಆದ್ದರಿಂದ ದಲಾಲನು ತನ್ನ ಕಡೆಗೆ ಬಂದ ರೈತನ ಮಾಲಿನ ಮೇಲೆ ಖರೀದಿ ಕರವನ್ನು ಕೊಡಬೇಕಾಯಿತು. ಹಾಗಿದ್ದರೆ ಅದನ್ನು ಎಲ್ಲಿಂದ ಭರತಿ-ಹಾಕಬೇಕು? ಒಂದೇ ದಾರಿಯೆಂದರೆ ರೈತನಿಗೆ ಕೊಡಬೇಕಾಗಿದ್ದ ರಕಮಿನಲ್ಲಿ ಇದೊಂದು ಖರ್ಚಿನ ಬಾಬ ಎಂಬ ರೀತಿಯಲ್ಲಿ ವಜಾ ಹಾಕುವದು.

ಏನಿದ್ದರೂ ದಲಾಲನು ವಿಕ್ರಿಯ ಕಾಲಕ್ಕೆ ಒಂದು ಅಥವಾ ಎರಡು ಕರಗಳನ್ನು ಆಸಾಮಿಯಮೇಲೆ ಹಾಕಬೇಕಾಗುವದು. ಬಹುಮುಖೀ ಕಾಯ್ದೆಯಲ್ಲಿದ್ದಂತೆ ದಲಾಲನಿಗೆ ಈ ಬಾರಿ ಪ್ರತ್ಯೇಕ ಸವಲತ್ತಿಲ್ಲ.

## ಹತ್ತಿ, ಎಣ್ಣೆಕಾಳಿನವರು

ಸುದೈವಕ್ಕೆ ಹತ್ತಿ, ಹತ್ತಿಕಾಳು, ಎಣ್ಣೆಕಾಳು, ಎಣ್ಣೆ ಇವುಗಳ ಮೇಲೆ ಮೊದಲನೇ ಕರವಿಲ್ಲ. ಅವುಗಳ ಮಾರಾಟವಾಯಿತೆಂದರೆ, ಹಿಂದಿನ ಖರೀದಿಯಮೇಲೆ ಖರೀದಿ ಕರವೂ ಬೀಳುವದಿಲ್ಲ. ಹತ್ತಿ, ಅರಳಿ, ಹತ್ತಿಕಾಳುಗಳ ಮೇಲೆ ೧% ರಂತೆ ಖರೀದಿ ಕರ ಮತ್ತು ಸಾಮಾನ್ಯ ಕರಗಳಿವೆ. ಅದೇ ಎಣ್ಣೆಯ ಕಾಳಿನ ಮೇಲೆ, ರೂ ಗೆ ೩ ಪೈಯಂತೆ ಆ ಎರಡು ಕರಗಳಿವೆ.

ರೈತನಿಂದ ಬಂದ ಹತ್ತಿಯನ್ನು ಜೀನಿಗೆ ಹಾಕಿ ಅರಳೆ, ಹತ್ತಿಕಾಳನ್ನು ಬೇರೆ ಮಾಡಿದರೆ ಖರೀದಿ ಕರವು ಲಾಗೂ ಆಗುತ್ತದೆ. ಎಂಬುದನ್ನು ಮರೆಬಾರದು. ಇಷ್ಟೇ, ಮುಂದೆ ಆ ಕರವು ಪರತ ಸಿಗುವದು. ಅದನ್ನೇ ಒಬ್ಬ

ನಂಬರದಾರನಿಂದ ಖರೀದಿ ಮಾಡಿದರೆ, ಅವನು ಸಾಮಾನ್ಯ ಕರವನ್ನು ಲಾಗು ಮಾಡುವದಿಲ್ಲ. [ಸ. ರೂಲ್ ೬ (೪)]. ಇದಕ್ಕಾಗಿ ೪ನೇ ಫಾರ್ಮಿನಲ್ಲಿ ಜೀನ್ ಮಾಡುವದನ್ನು ಸರ್ಟಿಫಿಕೇಟ ಕೊಡಬೇಕಾಗುತ್ತದೆ. ಅರಳೆ, ಹತ್ತಿಗಳ ಮುಂದಿನ ಮಾರಾಟದ ಮೇಲೆ ಶೇಕಡ ೧ ರಂತೆ ಸಾಮಾನ್ಯ ಕರವು ಬೀಳುತ್ತದೆ.

## ಅಡಿಕೆ, ಕಾಳುಮೆಣಸು.

ಉತ್ತರ ಕನ್ನಡ ಜಿಲ್ಹೆಯಲ್ಲಿ ಇವುಗಳ ವ್ಯಾಪಾರ ಹೆಚ್ಚು. ಅಡಿಕೆಯ ಮೇಲೆ ಹೊಸತಾಗಿ ಕರವು ಬಿದ್ದಿರುವದರಿಂದ, ಪ್ರತ್ಯೇಕವಾಗಿ ಈ ಬಗೆಯ ವ್ಯವಹಾರವನ್ನು ನೋಡಬೇಕಾಗಿದೆ.

ತೋಟಗಾರನ ಅಡಿಕೆಯನ್ನು ಸ್ಥಳಿಕ ದಲಾಲನೊಬ್ಬನು ಮುಂಬಯಿಗೆ ಮಾರಾಟಕ್ಕೆ ಕಳಿಸಿದಲ್ಲಿ, ದಲಾಲನು ಖರೀದಿಕರ ಇಲ್ಲವೆ ಮಾರಾಟ ಕರವನ್ನು ಕೊಡಬೇಕಾಗುತ್ತದೆ.

ಇನ್ನು ನಂಬರದಾರನಿಂದ ಅಡಿಕೆಯ ಖರೀದಿ ಮಾಡಿದರೆ, ಮುಂದೆ ಯಾವ ಕರವನ್ನೂ ಅಡಿಕೆಯವರು ಕೊಡಬೇಕಾಗಿಲ್ಲ. ೧-೪-೫೪ಕ್ಕೆ ಇದ್ದ ಸ್ಟಾಕಿನ ಅಡಿಕೆಯ ಮೇಲೆ ಮಾತ್ರ ಮೊದಲನೇ ಕರವು ಬೀಳುತ್ತದೆ. ಅಡಿಕೆಗೆ ಸಾಮಾನ್ಯ ಕರವಿಲ್ಲ.

ಅದೇ ಯಾಲಕ್ಕಿಯ ಮೇಲೆ ಮೊದಲನೇ ಕರವಿಲ್ಲ. ಸಾಮಾನ್ಯಕರ ಅರ್ಧ ಆಣೆಯಂತೆ ಇದೆ. ಸಾಮಾನ್ಯ ಕರವನ್ನು ನಿಮ್ಮ ಎಲ್ಲ ಯಾಲಕ್ಕಿಯ ಮಾರಾಟದ ಮೇಲೆ ಕೊಡಬೇಕಾಗುತ್ತದೆ. (ಲೈಸೆನ್ಸದಾರನಿಗೆ ಕೊಟ್ಟದ್ದನ್ನು ಹೊರ್ತುಪಡಿಸಿ)

ಮೆಣಸಿನ ಮೇಲೆ ರೂ,ಗೆ ೦—೦—೩ ಯಂತೆ ಮೊದಲನೇ ಕರವು ಅಥವಾ ಖರೀದಿ ಕರವು, ೦—೦—೬ ಯಂತೆ ಸಾಮಾನ್ಯ ಕರವು ಬೀಳುತ್ತದೆ.

## ಉತ್ಪಾದಕರು.

ಯಾವದೇ ಉತ್ಪಾದಕನು ಅಥವಾ ಸರಕನ್ನು ತಯಾರುಗೊಳಿಸಿ ಮಾರಾಟ ಮಾಡುವವನು ತನ್ನ ವ್ಯವಹಾರದಲ್ಲಿಯ ಒಂದು ಮುಖ್ಯ ಲಕ್ಷಣ

ನನ್ನು ಗಮನಿಸಬೇಕು. ಏಕೆಂದರೆ ಅವನು ಖರೀದಿ ಮಾಡಿದ ಸರಕು, ಮಾರಾಟಿ ಕಾಲವಲ್ಲಿ ಅದೇ ಸ್ಥಿತಿಯಲ್ಲಿ ಉಳಿಯುವದಿಲ್ಲ. ಅದು ರೂಪಾಂತರ ಹೊಂದುತ್ತದೆ.

ಇದರ ಪರಿಣಾಮವಾಗಿ ಮೊದಲನೇ ಕರವು ಅವರಿಗೆ ಖರೀದಿಯ ಮೇಲೂ ಬೀಳಬಹುದು; ಮಾರಾಟದ ಮೇಲಂತೂ ಬಿದ್ದೇ ತೀರುವದು. ಹೀಗೆ ಎರಡು ಬಾರಿ ಮೊದಲನೇ ಕರದ ಆಕರಣೆಯಾಗಿ ಲುಕ್ಸಾನವಾಗುವ ದೆಂದು ಮೇಲು ನೋಟಕ್ಕೆ ಅನಿಸುತ್ತದೆ. ಆದರೆ ವಸ್ತು ಸ್ಥಿತಿ ಹಾಗೇನಿಲ್ಲ.

ನಮ್ಮದೇ ಉದಾಹರಣೆಯನ್ನು ತಿಗೆದುಕೊಳ್ಳುವಾ. ನಾವು ಕಾಗದ, ಕ್ಯಾಲಿಕೋ, ರಟ್ಟು ಮುಂತಾದ್ದನ್ನು ಖರೀದಿಮಾಡಿ ದಿನವಹಿ ಡೈರಿಗಳನ್ನು ತಯಾರಿಸುತ್ತೇವಷ್ಟೆ. ಈ ಕಚ್ಚಾ ಸಾಮುಗ್ರಿಗಳ ಮೇಲೆ ಖರೀದಿಕರ ಅಥವಾ ಮಾರಾಟಕರವು ಮತ್ತು ಸಾಮಾನ್ಯಕರವು ಬಿದ್ದಿರುತ್ತದೆ ಮಾಲನ್ನು ತಯಾರುಮಾಡಿ ಮಾರಾಟ ಮಾಡುವ ಕಾಲಕ್ಕೆ ನಾವು ಪುನಃ ಎರಡೂ ಕರ ಗಳನ್ನು ಕೊಡಬೇಕಾಗಿ ಬರುತ್ತದೆ

ಆದರೆ ನಾವು ಖರೀದಿಯ ಮೇಲೆ ಕೊಟ್ಟಿರುವ ಕರಗಳನ್ನು, ಮಾಲು ತಯಾರಿಸುವಲ್ಲಿ ಆ ಸರಕನ್ನು ಉಪಯೋಗಿಸಿದ ತ್ರೈಮಾಸಿಕದಲ್ಲಿಯೇ ವಜಾ ಹಾಕಿ ಉಳಿದ ಹಣವನ್ನು ಮಾತ್ರ ತುಂಬಬಹುದು.

ಈ ಸಂಬಂಧವಾಗಿ ಉತ್ಪಾದಕರು ಕೆಳಗಿನ ಮಾತುಗಳನ್ನು ಗಮನದ ಲ್ಲಿಟ್ಟಿರಬೇಕು

೧. ಬಿ ಕೋಷ್ಟಕದ ೨೩-೨೪ನೇ ಸರಕುಗಳಿಗೆ(ಬೆಳ್ಳಿ-ಬಂಗಾರ) ಕೊಟ್ಟ ಮೊದಲನೇ ಕರವು ಪರತು ಸಿಗುವದಿಲ್ಲ.

೨. ಅದೇ ಕೋಷ್ಟಕದ ೧–೧೮ರ ವರೆಗಿನ ಸರಕುಗಳ ಮೇಲೆ ಕೊಟ್ಟ ಸಾಮಾನ್ಯ ಕರವು ನಿಯಮ ೧೧ (೧) ರನ್ವಯ, ೧೯–೪೦ರ ವರೆಗಿನ ಸರಕುಗಳ ಮೇಲೆ ಕೊಟ್ಟ ಅಂಥ ಕರವು ೧೧ (೨) ರನ್ವಯ ಪರತು ದೊರೆ ಯುತ್ತದೆ.

೩. ಹೀಗೆ ಕಚ್ಚಾ ಮಾಲಿನ ಬಗ್ಗೆ ದೊರೆಯುವ ಕರದ ರಕಮನ್ನು ಪ್ರೊಸೆಸ್ ಅಥವಾ ತಯಾರು ಮಾಡಲಿಕ್ಕೆ ತೊಡಗಿದೊಡನೆಯೇ ವಜಾ ಹಾಕಿಕೊಳ್ಳಬಹುದಲ್ಲದೆ ಮಾರಾಟವಾಗುವ ತನಕ ಕಾಯುವ ಅಗತ್ಯವಿಲ್ಲ,

೪. ಒಂದು ವೇಳೆ ನೀವು ಮಾಲನ್ನು ತಯಾರು ಮಾಡಿ ಹಾಗೆಯೇ ಪರಪ್ರಾಂತಕ್ಕೆ ಕಳಿಸಿದರೆ, ಕಳಿಸುವಲ್ಲಿ ತೊಡಗಿಸಿದರೆ, ಖರೀದಿಯ ಮೇಲೆ ಕೊಟ್ಟ ಕರಗಳು ಅಷ್ಟರ ಮಟ್ಟಿಗೆ ಪರತ ಸಿಗುವದಿಲ್ಲ.

## ಬೀಡಿಯುವರು

ಕರ್ನಾಟಕದಲ್ಲಿ ಸಣ್ಣ, ದೊಡ್ಡ ಬೀಡಿ ತಯಾರಿಸುವವರು ಅನೇಕರಿದ್ದಾರೆ ಅವರೆಲ್ಲರಿಗೂ ಹತ್ತುಸಾವಿರದ ವ್ಯವಹಾರ ಮಿತಿಯು ಲಾಗು ಇರುತ್ತದೆ. ಮತ್ತು ಒಂದು ವರ್ಷದಲ್ಲಿ ತಯಾರಿಸಲಾದ ಬೀಡಿಯ ಮುಖ ಬೆಲೆಯು ೨೫೦೦ ರೂ. ಆಗಿರಬೇಕು.

ತಂಬಾಕು ತುಮರಿ ಎಲೆಗಳ ಖರೀದಿಯ ಕಾಲಕ್ಕೆ ಖರೀದಿ ಇಲ್ಲವೆ ಮೊದಲನೇ ಕರ ಮತ್ತು ಸಾಮಾನ್ಯ ಕರ ಇವೆರಡೂ ಲಾಗೂ ಆಗುತ್ತವೆಂದು ತಿಳಿಯುವಾ. ಅವುಗಳಿಂದ ಬೀಡಿ ತಯಾರಾದ ಮೇಲೆ, ಆ ಮೂರು ತಿಂಗಳ ಅವಧಿಯಲ್ಲಿ ರಿಟರ್ನ ತುಂಬುವಾಗ ಅದನ್ನು, ತಾವು ಮಾರಾಟದ ಮೇಲೆ ಕೊಡಬೇಕಾದ ಹಣದಲ್ಲಿ ವಜಾ ಹಾಕಬೇಕು ಹೆಚ್ಚು ಉಳಿದರೆ ಪರತ ಕೇಳಬಹುದು.

ತಂಬಾಕು, ತುಮರಿಎಲೆ, ತಯಾರಾದ ಬೀಡಿ ಇವುಗಳ ಮೇಲೆ ೦—೧—೩ ಯ ಖರೀದಿ ಕರ, ಮೊದಲನೇ ಕರಗಳೂ, ೦—೦—೬ ಯ ಸಾಮಾನ್ಯ ಕರವೂ, ಇದೆ. ತಯಾರಾದ ಬೀಡಿಯ ಮಾರಾಟದ ಮೇಲೆ ಅವೆರಡನ್ನೂ ಕೊಡಬೇಕಾಗುತ್ತದೆ. ನಿಮ್ಮ ಮಾರಾಟವು ಠೋಕ ಇದ್ದರೆ, ಲೈಸೆನ್ಸ ದೊರಕಿಸಿಕೊಳ್ಳಬೇಕು.

ಬೀಡಿ ತಯಾರಕರಿಗೆ, ಮಾರಾಟಗಾರರಿಗೆ ಸಂಬಂಧಪಡುವ ಸರಕುಗಳ ದರಗಳನ್ನು ಕೆಳಗೆ ಕೊಟ್ಟಿದೆ.

| ನಂ. | ಹೆಸರು | ಖ.ಕರ | ಮೊ.ಕರ | ಸಾ.ಕರ |
|---|---|---|---|---|
| ೨೯ | ಕಡ್ಡೀಪೆಟ್ಟಿಗೆ | ೦-೦-೩ | ೦-೦-೩ | ಇಲ್ಲ |
| ೩೦ | ಸಿಗರೇಟು, ಸಿಗರೇಟಿನ ತಂಬಾಕು | ೦-೦-೬ | ೦-೦-೬ | ೦-೦-೬ |

| ನಂ. | ಹೆಸರು | ಖ.ಕರ | ಮೊ ಕರ | ಸಾ.ಕರ |
|---|---|---|---|---|
| ೬೯ | ಸಿಗಾರ್, ಚಿರೂಟಿ, ಪೈಪ ತಂಬಾಕು | ೦-·-೦ | ೦-೧-೦ | ೦-೦-೬ |
| ೭೦ | ತಂಬಾಕು, ಬೀಡಿ, ಬೀಡಿಎಲಿ, ಹುಕ್ಕಾದ ತಂಬಾಕ ಇ. ಇ. | ೦-೦-೩ | ೦-೦-೩ | ೦-೦-೬ |

## ಹೊಟೆಲಿನವರು.

ಇವರನ್ನು ಪ್ರೊಸೆಸರ್ ಎಂದು ಹೊಸ ಕಾಯದೆ ಪ್ರಕಾರ ತಿಳಿಯಲಾಗುತ್ತದೆ ಅಂದರೆ ಹತ್ತು ಸಾವಿರದ ವ್ಯವಹಾರವಿರಬೇಕಾಯಿತು. ಉಳಿದ ಉತ್ಪಾದಕರಂತೆ ಇವರೂ ತನ್ನು ಕಚ್ಚಾ ಮಾಲುಗಳಾದ ಸಕ್ಕರೆ, ಚಹಾಪುಡಿ, ಎಣ್ಣೆ, ಮುಂತಾದವುಗಳ ಮೇಲೆ ಕೊಟ್ಟಷ್ಟು ಕರಗಳನ್ನು ಅದೇ ಮೂರು ತಿಂಗಳಲ್ಲಿಯೇ ಕೊಡಬೇಕಾದ ರೊಕ್ಕದಲ್ಲಿ ಕಳೆದು ಹಣವನ್ನು ತುಂಬಬೇಕು. ಎಂದಿನಂತೆ ಅಂಗಡಿಯ ಹೊರಗಡೆ ಕಳಿಸಿದ ಯಾವದೇ ಮಾಲಿಗೆ, ೧ ರೂ ಗಿಂತ ಹೆಚ್ಚಿಗೆ ಒಬ್ಬನು ಮಾಡಿದ ಬಿಲ್ಲಿನ ಹಣಕ್ಕೂ ಅವರು ಕರವನ್ನು ಕೊಡುವುದು ಇದೆ ಸಿಹಿ ತಿನಸುಗಳನ್ನು ಸ್ಪೆಶಲ್ ಆಗಿ ತಯಾರಿಸಿ ಪ್ರತ್ಯೇಕವಾಗಿ ಮಾರುತ್ತಿದ್ದರೆ, ೦—೦—೬ ಯಂತೆ ಮೊದಲನೇ ಕರ ಹಾಗೂ ಸಾಮಾನ್ಯ ಕರಗಳನ್ನು ಕೊಡಬೇಕಾಗುತ್ತದೆ. ಅಂಗಡಿಯಲ್ಲೇ ತಿಂದ ಇಂಥ ಸಿಹಿ ತಿನಿಸುಗಳಿಗೆ ಹೆಚ್ಚಿನ ಕರವೆಂಬುದಿಲ್ಲ.

ಹೋಟೆಲಿನವರು ತಮ್ಮ ಕರಪಾತ್ರ ಮಾರಾಟದ ಮೇಲೆ ೦—೦—೩ ಮೊದಲನೇ ಕರ, ೦—೦—೬ ಸಾ. ಕರವನ್ನು ಕೊಡುವರು. ಬಿನ್ ನಂಬರದಾರರಿಂದ ಯಾವದೇ ಕರಪಾತ್ರ ಮಾಲಿನ ಖರೀದಿ ಇದ್ದರೆ ಅದರ ಮೇಲೆ ಖರೀದಿ ಕರವೆಂದು ಹಿಡಿದು, ತ್ರೈಮಾಸಿಕ ಹಣದಲ್ಲಿ ವಜಾ ಹಾಕಬೇಕು

## ಗಾಣದವರು

ಮನೆಯಲ್ಲಿ ಗಾಣವನ್ನಿಟ್ಟು ಎಣ್ಣೆ ತೆಗೆಯುವವರೂ ಹತ್ತು ಸಾವಿರದವರೇ. ಆದುದರಿಂದ ಅಂಥವರೆಲ್ಲ ನಂಬರನ್ನು ತೆಗೆದುಕೊಳ್ಳಬೇಕಾಗುತ್ತದೆ. ಅವರು ತಮ್ಮ ಕಚ್ಚಾ ಸಾಮುಗ್ರಿಯಾದ ಕುಸಬಿ, ಮತ್ತಿತರ ಎಣ್ಣೆಯ ಕಾಳು

ಗೆಳನ್ನು ಬಿನ್ ನಂಬರದಾರನಿಂದ ಖರೀದಿ ಮಾಡಿದಾಗ ಖರೀದಿ ಕರವನ್ನು ಕೊಡಬೇಕಾಗುತ್ತದೆ ಅದರಲ್ಲಿಯ ಸ್ವಲ್ಪ ಭಾಗವನ್ನು ಪುನರ್ಮಾರಾಟ ಮಾಡಿದರೆ ಖರೀದಿ ಕರವಿಲ್ಲ. ಆದರೆ ಎಣ್ಣೆಯನ್ನು ಮಾರಾಟ ಮಾಡುವ ಕಾಲಕ್ಕೆ ವರ್ಷಕ್ಕೊಮ್ಮೆ ಮಾನ್ಯತಾ ಪತ್ರವನ್ನು (ರಿಕಾಗ್ನಿಶನ್) ಪಡೆದು ಮಾರಾಟ ಮಾಡಿದಲ್ಲಿ ಅದಕ್ಕೆ ಯಾವದೇ ಬಗೆಯ ಕರವು ಬೀಳುವದಿಲ್ಲ. ಇಂಥ ಮಾನ್ಯತಾ ಪತ್ರವನ್ನು ಗಾಣದವರಿಗೂ, ಅವರ ಸಂಸ್ಥೆಗಳಿಗೂ ಎಣ್ಣೆ ಮಾರಾಟ ಮಾಡುವ ಗ್ರಾಮೋದ್ಯೋಗ ಸಂಸ್ಥೆಗಳಿಗೂ ಕೊಡಲು ಬರುವದು.

ಗಾಣದ ಎಣ್ಣೆಯನ್ನು ಬೇರೊಬ್ಬನು ಮಾರಾಟ ಮಾಡಲಿಕ್ಕೆ ತೊಡಗಿದರೆ, ಅಂಥ ಬೇರೊಬ್ಬ ಮಾರಾಟದಾರರ ಮಾರಾಟವು ಕರ ಮುಕ್ತವಾಗುವದಿಲ್ಲವೆಂಬುದನ್ನು ಮರೆಯಬಾರದು.

## ಮುದ್ರಕರು ಮತ್ತು ಪುಸ್ತಕ ಪ್ರಕಾಶಕರು

ಈ ಹಿಂದಿನ ಎರಡೂ ಕಾಯ್ದೆಗಳಲ್ಲಿ ಮುದ್ರಕರಿಗೆ ಕರಮುಕ್ತತೆ ದೊರಿತಿತ್ತು. ಈಗ ಹಾಗಿಲ್ಲ. ಪುಸ್ತಕ, ಫಾರ್ಮ್, ಚಿತ್ರಗಳು ಇನಾವುವೇ ಇರಲಿ, ಗೊತ್ತು ಮಾಡಿದ ಬೆಲೆಗೆ ಮಾಡಿಕೊಟ್ಟರೆ, ಅದರ ಮೇಲೆ ಕರವು ಬೀಳುತ್ತದೆ. ಕೇವಲ ಜಾಬ್ ವರ್ಕ ಎಂದು ಮಾಡಿಕೊಟ್ಟಲ್ಲಿ ಅದು ಮಾರಾಟವೆನಿಸುವದಿಲ್ಲ ಉದಾಹರಣೆಗೆ ಒಬ್ಬರು ಕಾಗದವನ್ನು ತಂದುಕೊಟ್ಟು ಒಂದು ಪುಸ್ತಕವನ್ನು ಮಾಡಿಸಿಕೊಂಡು ಹೋದರೆ, ನಮಗೆ ಬರುವ ಹಣವು ಬರೀ ಮೊಳೆ ಜೋಡಿಸುವದು ಮತ್ತು ಮುದ್ರಣದ್ದು ಮಾತ್ರ ಇರುತ್ತದೆ. ಹಾಗಾಗಿ ಅದು ಮಾರಾಟವಾಗುವದಿಲ್ಲ.

ಪುಸ್ತಕಗಳ ಪ್ರಕಾಶಕರು ಮತ್ತು ಮಾರಾಟಗಾರರಿಗೆ ಹೋದಕಾಯದೆಗಿಂತ ಹೆಚ್ಚಿನ ಸವಲತ್ತು ಇದೆ. ಎಂದರೆ ಅವುಗಳ ಮೇಲೆ ಸಾಮಾನ್ಯ ಕರವಿಲ್ಲ. ಉಗಮದಲ್ಲಿ ೮-೦-೩ಿಯ ಮಾರಾಟಕರವು ಮುಟ್ಟಿದರೆ ಸಾಕು. ಪರಪ್ರಾಂತದಿಂದ ತರಿಸಿದ ಪುಸ್ತಕಗಳಿದ್ದರೆ ಅವುಗಳ ಮೇಲೆ ಖರೀದಿ ಕರ ಇಲ್ಲವೆ ಮೊದಲನೆ ಕರವು ಬೀಳುವದು. ಪತ್ಯ ಪುಸ್ತಕಗಳಿಗೆ ಎಂದಿನಂತೆ ಕರವಿಲ್ಲ. ಮಹತ್ವದ ಮಾತೆಂದರೆ, ಡೈರಿ, ಕೆಲೆಂಡರ್, ಖಾತೆ ಕಿರ್ದಿಯ ಬುಕ್ಕುಗಳು— ಇವು ಪುಸ್ತಕ ಮತ್ತು ಪತ್ರಿಕೆಗಳನ್ನು ಕಾಣಿಸಿದ ಬಿ ಕೋಷ್ಟಕದ

೨೦ ನೇ ನಮೂನಿನಲ್ಲಿ ಬರದೇ ೮೦ನೇಪ್ಪದಲ್ಲಿ ಬರುತ್ತವೆ. ಹಾಗಾಗಿ ಅವುಗ ಳನ್ನು ತಯಾರಿಸುವವರು ೦-೦-೯ ಒಟ್ಟಿನಲ್ಲಿ ತಮ್ಮ ಮೊದಲ ಮಾರಾಟದ ಮೇಲೆ ಕೊಡಬೇಕಾಗಿ ಬರುತ್ತದೆ. ನಂತರದ ಮಾರಾಟಗಳ ಮೇಲೆ ಸಾಮಾನ್ಯ ಕರವೂ ಇದೆ.

## ಸರಾಫಿಯುವರು.

ಇವರಿಗೆ ಸಂಬಂಧಪಡುವ ಸರಕು ಮತ್ತು ದರಗಳನ್ನು ಮೊದಲಿಗೆ ಕೊಟ್ಟು ಬಿಡುತ್ತೇನೆ.

| ಸಂ. | | ಖ ಕರ | ಮೊ.ಕರ | ಸಾ.ಕರ |
|---|---|---|---|---|
| ೨೩ | ಬೆಳ್ಳಿ, ಬಂಗಾರ | ೧/೪% | ೧/೪% | ೧/೪% |
| ೨೪ | ಬೆಳ್ಳಿ ಬಂಗಾರದ ದಾಗೀನು | | | |
| | ಮುತ್ತು-ಹರಳು ಕೂಡಿರದಿದ್ದದ್ದು | ೧/೪% | ೧/೪% | ೦-೦-೩ |
| ೨೫ | ಮುತ್ತು. ರತ್ನ, ಕೃತ್ರಿಮ ಹರಳು | ೦-೦-೬ | ೦-೦-೬ | ೦-೦-೬ |
| | ನಕ್ಷೆಯಿದ್ದ ಬೆಳ್ಳಿಬಂಗಾರಮಾಲು | ೦-೧-೦ | ೦-೧-೦ | ೦-೦-೬ |

ಮುತ್ತು ಹರಳು ಕೂಡಿದ ದಾಗೀನುಗಳ ಮೇಲೆ ಮೊದಲನೇ ಕರವಿಲ್ಲ [ಸ.ರೂಲ್ಸ ೫ (೧) (ii)] ಆದರೆ ಆ ದಾಗೀನಿನಲ್ಲಿಯ ಮುತ್ತು ಅಥವಾ ಹರಳಿನ ಖರೀದಿಯು ಒಬ್ಬ ನಂಬರದಾರನ ಕಡೆಯಿಂದ ಆಗಿರಬೇಕು. ಹಾಗೆ ಆಗಿರದಿದ್ದರೆ ಅಂಥ ಮುತ್ತು ಹರಳಿಗಷ್ಟೇ ಪ್ರತ್ಯೇಕ ಕರವು ಬೀಳುತ್ತದೆ.

ಅದರಂತೆ ಬಂಗಾರವನ್ನು ತೇಜಾಪ ಮಾಡಲಿಕ್ಕೆ ನಂಬರದಾರರಿಗೆ ಕೊಟ್ಟಂಥ ಮಾರಾಟದ ಮೇಲೆಯೂ ಒಂದು ಬಗೆಯ ಕರಮುಕ್ತತೆಯಿದೆ. [ಸ. ರೂಲ ೭ (i)]

ಬಿನ್ ನಂಬರದಾರರಿಂದ ಹಳೆಯ ದಾಗೀನುಗಳನ್ನು ಖರೀದಿ ಮಾಡಿ ದರೆ ಅವುಗಳ ಮೇಲೆ ಖರೀದಿ ಕರವು ಬೀಳುವದು. ಮುಂದೆ ಅವನ್ನು ಕರ ಗಿಸಿ ತೇಜಾಪ ಮಾಡಿ ಮಾರಾಟ ಮಾಡಿದಲ್ಲಿ ಅಲ್ಲಿಯೂ ವಿಕ್ರಿಕರ ಮತ್ತು ಸಾಮಾನ್ಯ ಕರವು ಬೀಳುತ್ತದೆ. ಇಷ್ಟೇ, ಅದನ್ನು ಕರಗಿಸಿದೊಡನೆಯೇ ಖರೀದಿಯ ಕರವನ್ನು ಇಲ್ಲವೆ ತಮ್ಮ ಖರೀದಿಯ ಕಾಲಕ್ಕೆ ಕೊಟ್ಟಂಥ ಸಾಮಾನ್ಯ ಕರವನ್ನು ಆದರಲ್ಲಿ ವಜಾ ಮಾಡಲು ಬರುತ್ತದೆ.

ಅಂತೂ ಸರಾಫಿ ವ್ಯವಹಾರವಲ್ಲಿ ಒಂದು ಮುಖ್ಯ ಬದಲಾವಣೆಯೆಂದರೆ ಈ ಹಿಂದೆ ಒಂದು ತೊಲಿ ಬಂಗಾರದ ಡಾಗೀನಿನಲ್ಲಿ ೨ ರೂ.ಯು ಒಂದು ಸಣ್ಣ ಹರಳು ಕೂಡಿದ್ದರೆ ನಾಕು, ಸ್ಪೆಶಲ್ ಆಗಿ ಅದರ ಮೇಲೆ ಹೆಚ್ಚಿನ ಕರ ಭಾರವು ಬೀಳುತ್ತಿತ್ತು ಈಗ ಅದು ಹೋದಂತಾಗಿದೆ.

## ಕಿರಕೋಳ ಮಾರಾಟಗಾರರು.

ಈ ಮಾಲಿಕೆಯಲ್ಲಿ ಕಿರಾಣಿಯುವರು, ಔಷಧಿ. ಕಬ್ಬಿಣ, ತಾಮ್ರ, ಹಿತ್ತಾಳೆಯ ವ್ಯವಹಾರಸ್ಥರು ಬರುತ್ತಾರೆನ್ನಬೇಕು. ಮೂವತ್ತು ನಾವಿರ ಕ್ಕಿದ್ದ ಇವರ ವ್ಯವಹಾರ ಪರಿಮಿತಿಯನ್ನು, ಈಗ ೨೫ ನಾವಿರಕ್ಕೆ ಇಳಿಸ ಲಾಗಿದೆ.

ಇಂಥವರ ಖರೀದಿಯು ಹೆಚ್ಚಾಗಿ ನಂಬರದಾರರ ಕಡೆಯಿಂದ ಆಗಿರು ವದರಿಂದ ಮೊದಲನೇ ಕರವನ್ನು ಕೊಡುವ ಪ್ರಸಂಗವು ಬರುವದಿಲ್ಲ. ಒಂದು ವೇಳೆ ಪರಪ್ರಾಂತ ಅಥವಾ ಬಿನ್‌ನಂಬರದಾರರಿಂದ ಖರೀದಿ ಇದ್ದರೆ ಅದರ ಮೇಲೆ ಖರೀದಿ ಕರ ಕೊಟ್ಟುಬಿಟ್ಟರೆ ಒಟ್ಟೀ ಮೊದಲನೇ ಕರದ ತೊಂದರೆ ತಪ್ಪುತ್ತದೆ.

ಸಾಮಾನ್ಯ ಕರವನ್ನು ಕೊಡಬೇಕಾದುದರಿಂದ, ಮತ್ತು ಗಿರಾಕಿಗಳ ಕಡೆಯಿಯಿಂದ ವಸೂಲಾಗುವದು ಬಹಳ ಮಟ್ಟಿಗೆ ಇರುವದಿಲ್ಲವಾದ್ದರಿಂದ ಹಿಂದೆ ಹೇಳಿದ ಗುತ್ತಿಗೆ ಹಣದ ರೂಪದಲ್ಲಿ ಸಾಮಾನ್ಯ ಕರವನ್ನು ಕೊಡು ವುದು ಕಿರಕೋಳದಾರರಿಗೆ ಬಹಳ ಅನುಕೂಲವಾದುದು.

## ಜವಳಿ ಅಂಗಡಿಯುವರು

ಕಿರಕುಳ ವ್ಯವಹಾರಸ್ಥರಲ್ಲಿ ಇವರನ್ನು ಪ್ರತ್ಯೇಕವಾಗಿ ಹೇಳುವ ಅಗತ್ಯ ವಿದೆ. ಈ ವ್ಯವಹಾರಸ್ಥರನ್ನು ಬಾಧಿಸುವ ಮುಖ್ಯ ಪ್ರಶ್ನೆಗಳೆಂದರೆ—

೧. ಈ ಹಿಂದೆ ಇದ್ದ ಸ್ಟಾಕಿನ ಮೇಲೆ ಏನು ಕರ ತಗೊಳ್ಳಬೇಕು.

೨ ಬೇರೆ ಬೇರೆ ಕಡೆಯಿಂದ ಬಂದ ಅರಿವೆ ಇರುತ್ತದೆ. ಮೊದಲನೇ ಕರವನ್ನು ಕೊಡಬೇಕಾಗಿ ಬಂದಾಗ ಅಥವಾ ಲೆಕ್ಕ ಇರುವಾಗ ಆದರ ಖರೀದಿ ಯನ್ನು ಹೇಗೆ ಗೊತ್ತು ಹಚ್ಚುವದು?

೩. ೮–೧೦ ನಮೂನೆಯ ದರಗಳನ್ನು ಬಟ್ಟೆಯ ವಿಚಾರವಾಗಿ ಗೊತ್ತು ಮಾಡಿರುವದರಿಂದ ಅದಕ್ಕೇನು ಮಾಡುವುದು?

೪. ಲೆಕ್ಕ ಪತ್ರಗಳನ್ನು ಇಡಬೇಕಾದರೂ ಹೇಗೆ.

ಒಂದೊಂದಾಗಿ ನೋಡುವಾ.

೧೯೫೪ ಎಪ್ರಿಲ ೧ನೇ ತಾ. ಗೆ ಇರುವ ಸ್ಟಾಕಿನ ಮಾರಾಟದ ಮೇಲೆ ಮೊದಲನೇ ಕರ (ಲಾಗೂ ಇದ್ದರೆ), ಮತ್ತು ಸಾಮಾನ್ಯ ಕರ ಇವನ್ನು ಕೊಡಲೇಬೇಕಾಗುವದು ಗಟ್ಟಿ ಮಾತು. ಈಗ ವ್ಯವಹಾರವನ್ನು ಮುಂದುವರಿಸಿದಂತೆಲ್ಲ ಪ್ರತ್ಯೇಕವಾಗಿ ಬಿಲ್ ಬುಕ್ಕನ್ನ ಇಟ್ಟು ಎರಡೂ ಕರಗಳನ್ನು ಬರೆಯುತ್ತ ಹೋಗುವುದು ಒಂದು ರೀತಿ ಇನ್ನು ಆ ಹಳೆಯ ಸ್ಟಾಕು ಯಾವಾಗ ತೀರಿತು ಎಂಬುದು ತಿಳಿಯಬೇಕಾಗುತ್ತದೆ. ಅದಕ್ಕಾಗಿ ೩೧-೩-೫೪ಕ್ಕೆ ಇದ್ದ ಸ್ಟಾಕಿನ ವಿವರಗಳನ್ನು ವಿವಿಧ ದರಗಳಲ್ಲಿ ಭಾಗಮಾಡಿ ಇಡಲೇಬೇಕಾಗುತ್ತದೆ.

ಒಂದುವೇಳೆ ಸ್ಟಾಕಿನ ಲೆಕ್ಕ ಹತ್ತಿ ನಿಮಗೆ ಸಿಗುವ ಲಾಭಾಂಶದ ಪ್ರಮಾಣವನ್ನು ಸೇರಿಸಿ ಒಮ್ಮೆ ಮೊದಲನೇ ಕರವನ್ನು ತುಂಬಿಬಿಟ್ಟರೆ ಒಟ್ಟೀ ತೊಂದರೆ ತಪ್ಪಬಹುದಲ್ಲವೆ? ಜವಳಿಯುವರಷ್ಟೇ ಅಲ್ಲ. ಇತರರೂ ಈ ಬಗ್ಗೆ ಯೋಚಿಸಬೇಕು. ಅದರಿಂದ ಲೆಕ್ಕವನ್ನು ಹೇಗೆ ಇಡಬೇಕೆಂಬ ತೊಂದರೆಯೂ ಅರ್ಧಕ್ಕರ್ಧ ಕಡಿಮೆಯಾದೀತು

ಹಲವಾರು ಬಗೆಯ ಕರದ ದರಗಳೇನೂ ಹೊರಡುತ್ತವೆಂಬುದು ನಿಜ. ಆದರೆ ಅದು ಮೊದಲನೇ ಕರದ ವಿಚಾರದಲ್ಲಿ ಮಾತ್ರ ಸಾಮಾನ್ಯ ಕರವು ಎಲ್ಲ ಬಗೆಯ ಮಾಲಿಗೂ ೦—೦—೩ಯಂತೆ ಇದೆ. ನಂಬರದಾರರ ಕಡೆಯಿಂದ ಖರೀದಿ ಆಗಿದ್ದರೆ, ಮೊದಲನೇ ಕರವನ್ನು ಕೊಡಬೇಕಾಗಿಲ್ಲವಷ್ಟೆ. ಆದುದರಿಂದ ನಿಮ್ಮ ಹೆಚ್ಚಿನ ಖರೀದಿಯು ನೋಂದಣಿ ನಂಬರು ಇದ್ದವರಿಂದ ಆಗಿದ್ದರೆ ನೆಟ್ಟಗೆ. ಪರಪ್ರಾಂತದಿಂದ ಬಂದ ಮಾಲಿನ ಮೇಲಿನ ಲೆಕ್ಕವು ಮಾತ್ರ ಒಂದು ಕಡೆ ಸಿಗುವಂತಿರಬೇಕಾಗುತ್ತದೆ.

ಅರಿವೆಯ ಖರೀದಿಯು ಹಲವು ಬಾರಿ ಬಿನ್ ನಂಬರದಾರರ ಕಡೆಯಿಂದ ಆಗುವದು ಇರುವದರಿಂದ, ಖರೀದಿ ಕರವನ್ನು ಕೊಡಬೇಕೋ

ಮೊದಲನೇ ಕರವನ್ನು ಕೊಡಬೇಕೊ ಎಂಬುದನ್ನು ಆಯ್ಕೆ ಮಾಡುವ ಪ್ರಸಂಗ ಬರುತ್ತದೆ. [ಸೆ. ೧೦ (ಅ)] ಮೊದಲನೇ ಕರವನ್ನು ಕೊಡುತ್ತೇವೆ ಎನ್ನುವುದೇ ಹೆಚ್ಚು ಹಿತಕಾರಿ. ಏನಿದ್ದರೂ ಈ ಹಿಂದೆ ಹೇಳಿದಂತೆ ನಿಮ್ಮ ಯಾವದೇ ನಿರ್ಣಯವನ್ನು ೩೦ನೇ ಜೂನ್‌ದೊಳಗಾಗಿ ತಿಳಿಸಬೇಕು ಎಂದಿದೆ.

ಇನ್ನು ದರಗಳು ಖಾದಿ ಅರಿವೆ, ಖದ್ದರ, ೨ರೂ. ಒಳಗಿನ ದರದ ಕೈಮಗ್ಗದ ಅರಿವೆಗಳು ಬಟ್ಟೆ ಕರ ಮುಕ್ತವಿರುತ್ತವೆ ಉಳಿದೆಲ್ಲ ಅರಿವೆಗಳ ಮೇಲೆ ಸಾಮಾನ್ಯ ಕರವು ೦-೦-೬ಯಂತೆ ತಪ್ಪದೇ ಇದೆ. ಮೊದಲನೇ ಕರದ ದೃಷ್ಟಿಯಿಂದ ಈ ಕೆಳಗೆ ದರಗಳ ಪಟ್ಟಿಯನ್ನು ಕೊಟ್ಟಿದೆ.

| ನಂ. | ಹೆಸರು | ಮೊ. ಕರ | ಖ. ಕರ |
|---|---|---|---|
| ೧೦ | ೨ರೂ. ಮೇಲಿನ **ಯಾವದೆ** ಕೈಮಗ್ಗದ ಅರಿವೆ | ಇಲ್ಲ | ೦-೦-೩ |
| ೧೧ | ಉರುಟು ಮತ್ತು ಮಧ್ಯಮ **ನೂಲಿನ** ಅರಿವೆ | ಇಲ್ಲ | ೦-೦-೩ |
| ೩೧ | ಮೇಲೆ ಹೇಳಿದ್ದನ್ನು ಬಿಟ್ಟು ಉಳಿದ **ಯಾವದೇ** ಅರಿವೆ (೩ರೂ. ಒಳಗಿನ ದರದ್ದು) | ೦-೦-೬ | ೦-೦-೬ |
| ೭೯ | ೧೦-೧೧ರಲ್ಲಿ ಹೇಳಿದ್ದನ್ನು ಬಿಟ್ಟು ಉಳಿದ **ಯಾವದೇ** ಅರವೆ (೩ರೂ. ಮೇಲಿನ ದರದ್ದು) | ೦-೧-೩ | ೦-೧-೩ |
| ೮೦ | ತಯಾರಿ ಅರಿವೆ-ಒಂದಕ್ಕೆ ೧೦ ರೂ. ಗಿಂತ ಕಡಿಮೆ ದರ | ೦-೦-೩ | ೦-೦-೩ |
| ೬೧(ii) | ,, ,, ,, ೫ ರೂ. ಗಿಂತ ಹೆಚ್ಚಿನದರ–ವಿಶಿಷ್ಟ ಸೈಜಿನವು | ೦-೧-೦ | ೦-೧-೦ |
| ೬೧(iii) | ,, ,, ,, ೧೦ ರೂ. ಗಿಂತ ಹೆಚ್ಚಿನ ದರ | ೦-೧-೦ | ೦-೧-೦ |
| ೮೦ | ಹೊಸ್ಸೆರಿ ಮತ್ತು ಹೆಣಿಕೆಯವು ೩ ರೂ.ಗಿಂತ ಕಡಿಮೆ ಬೆಲೆ ಒಂದಕ್ಕೆ | ೦-೦-೩ | ೦-೦-೩ |
| ೬೧(i) | ,, ,, ಹೆಚ್ಚಿನ ಬೆಲೆ ,, | ೦-೧-೦ | ೦-೧-೦ |

# ಪರಿಶಿಷ್ಟ ೧.

## 'ಎ' ಕೋಷ್ಟಕವು

## ಸಂಪೂರ್ಣ ಕರ ಮುಕ್ತ ಮಾಲಿನ ಪಟ್ಟಿಯು.

(ಅಲ್ಲಲ್ಲಿ ಸಂಕ್ಷಿಪ್ತಗೊಳಿಸಲಾಗಿದೆ)

೧. ಒಕ್ಕಲತನದ ಸಾಧನಗಳು
೨. ವೀಳೆಯದೆಲೆ
೩. ಬ್ರೆಡ್ಡು
೪. ಮಜ್ಜಿಗೆ, ಮೊಸರು
೫ ದನ, ಕುರಿ, ಆಡು
೬. ಮೇವು, ಹೊಟ್ಟು
೭. ಆಹಾರ ಧಾನ್ಯಗಳು
೮. ಚರಖಾ
೯. ಮೆಣಸಿನಕಾಯಿ, ಹುಣಸೆಹಣ್ಣು
೧೦ ೨ರೂ.ದರದ ಒಳಗಿನ ಕೈಮಗ್ಗದ ಬಟ್ಟೆ
೧೧. ಖಾದಿಯ ಅರಿವೆ- ಅಧಿಕೃತ ವ್ಯಾಪಾರಸ್ಥರಿಂ
೧೨.
೧೩. ಹತ್ತಿಯ ನೂಲು ಮತ್ತು ದಾರ
೧೪. ಅಧಿಕೃತ ಗಾಣಿಗರು ಮಾರಾಟ ಮಾಡುವ ಎಣ್ಣೆಗಳು
೧೫. ತತ್ತಿ
೧೬. ವಿದ್ಯುತ್
೧೭. ಕಲ್ಲಿದ್ದಲಿ
೧೮. ಉರವಲು, ಇದ್ದಲಿ
೧೯. ಮೀನ
೨೦. ಹಿಟ್ಟು-ಮೈದಾ, ಬ್ರಾನ್ ವಗೈರೆ
೨೧. ಹೂವು
೨೨. ಹೋಟೇಲಿನಲ್ಲಿ ವ್ಯಯಿಸಿದ ೧ ರೂ.ಒಳಗಿನ ಒಬ್ಬನ ಆಹಾರ ತಿನಿಸು
೨೩. ತಾಜಾ ಹಣ್ಣು
೨೪ ಕಾಯಿಪಲ್ಲೆ
೨೫. ೨ ಆಣೆಗಿಂತ ಕಡಿಮೆ ದರದ [ಬಳೆಗಳು
೨೬. ಬೆಲ್ಲ
೨೭. ಕೈಯಿಂದ ಮಾಡಿದ ದೇಶೀ ಕಾಗದ
೨೮. ಚಿಮಣಿ ಎಣ್ಣೆ
೨೯. ಖಾದಿ
೩೦. ಕುಂಕುಮ
೩೧. ಮಂಗಲಸೂತ್ರ
೩೨. ಮಾಂಸ
೩೩. ಗೊಬ್ಬರ, ಹಿಂಡಿ
೩೪. ಹಾಲು
೩೫. ಪೆಟ್ರೋಲ್ ವಗೈರೆ
೩೬. ನಿಯತ ಕಾಲಿಕಗಳು
೩೭. ಉಪ್ಪು
೩೮. ಶಾಲೋಪಯೋಗಿಪದಾರ್ಥಗಳು ಪಾಟಿ, ಪೆನ್ಸಿಲ್ ಇತ್ಯಾದಿ
೩೯. ಸ್ಟಾಂಪ್ ಪೇಪರ
೪೦. ಕಬ್ಬು
೪೧. ಪಠ್ಯ-ಪುಸ್ತಕಗಳು (ಮಂಜೂರಾದವುಗಳು)
೪೨. ನೀರು

---

೬, ೯, ೧೯, ೨೦, ೩೩ ಈ ಸರಕುಗಳನ್ನು ಸೀಲ್ ಮಾಡಿದ ಪಾತ್ರಕದಲ್ಲಿ ಮಾರಾಟ ಮಾಡಿದರೆ ಕರಮುಕ್ತವಾಗುವದಿಲ್ಲ.

# ಪರಿಶಿಷ್ಟ ೨

## "ಬಿ" ಕೋಷ್ಟಕ

### ಕರ ಪಾತ್ರ ಸರಕುಗಳ ಮೇಲಿನ ಕರಗಳ ಪಟ್ಟಿಯು:

( * ಗುರುತು ಹಾಕಿದಲ್ಲಿ ಸಂಕ್ಷಿಪ್ತಗೊಳಿಸಲಾಗಿದೆ )

| ನಂ. | ಮಾಲಿನ ಹೆಸರು | | ಮೊ.ಕರ | ಸಾ. ಕರ | ಖ ಕರ. |
|---|---|---|---|---|---|
| ೧. | ಹತ್ತಿ | .... | ಇಲ್ಲ | ೧% | ೧% |
| ೨. | ಹತ್ತಿಕಾಳು | .... | ,, | ೧% | ೧% |
| ೩. | ಕೃತ್ರಿಮ ರೇಶ್ಮೆ ನೂಲು | .... | ,, | ೦ ೦-೩ | ೦-೦-೩ |
| ೪. | ಚರ್ಮ, ತೊಗಲು | .... | ,, | ೦ ೦-೩ | ೦-೦-೩ |
| ೫. | ಎಣ್ಣೆ ಕಾಳುಗಳು | .... | ,, | ೦ ೦-೩ | ೦-೦-೩ |
| ೬. | ಕಚ್ಚಾ ರೇಶ್ಮೆ ಮತ್ತು ನೂಲು | .... | ,, | ೦-೦-೩ | ೦-೦-೩ |
| ೭. | ಕಚ್ಚಾ ಉಣ್ಣೆ ಮತ್ತು ನೂಲು | .... | ,, | ೦-೦-೩ | ೦-೦-೩ |
| ೮. | ಸ್ಟೇಪಲ್ ಫೈಬರ್ * | .... | ,, | ೦-೦-೩ | ೦-೦-೩ |
| ೯. | ಬೇಸಾಯದ ಸಾಧನಗಳು(ಎ ಕೋಷ್ಟಕದಲ್ಲಿ ಹೇಳಿದ್ದನ್ನು ಬಿಟ್ಟು) * | | ,, | ೦-೦-೬ | ೦-೦-೩ |
| ೧೦. | ಕೈಮಗ್ಗದ ಅರಿವೆ (೨ರೂ.ಗಿಂತ ಹೆಚ್ಚಿನ ದರದ್ದು) | .... | ,, | ೦-೦-೬ | ೦-೦-೩ |
| ೧೧. | ಉರುಟು ಮತ್ತುಮಧ್ಯಮ ನೂಲಿನ ಅರಿವೆ * | .... | ,, | ೦-೦-೬ | ೦-೦-೩ |
| ೧೨. | ಕೋಕ್ | .... | ,, | ೦-೦-೬ | ೦-೦-೩ |

| | | | | |
|---|---|---|---|---|
| ೧೩. ಒಣಗಿಸಿದ ಹಣ್ಣು ಬೀಜ * | .... | ,, | ೦-೦-೬ | ೦-೦-೩ |
| ೧೪. ತಿನ್ನುವ ಎಣ್ಣೆ | .... | ,, | ೦-೦-೬ | ೦-೦-೩ |
| ೧೫. ಕಬ್ಬಿಣ, ಉಕ್ಕು | .... | ,, | ೦-೦-೬ | ೦-೦-೩ |
| ೧೬. ನಾರು * | .... | ,, | ೦-೦-೬ | ೦-೦-೩ |
| ೧೭. ಹಾಲಿನಿಂದ ತಯಾರಾದವುಗಳು * | .... | ,, | ೦-೦-೬ | ೦-೦-೩ |
| ೧೮. ಪೆಟ್ರೋಲಿಯಮ್‌ದ ವಸ್ತುಗಳು * | .... | ,, | ೦-೦-೬ | ೦-೦-೩ |
| ೧೯. ಅಡಿಕೆ | ... | ೦-೦-೩ | ಇಲ್ಲ | ೦-೦-೩ |
| ೨೦. ಪುಸ್ತಕಗಳು, ಪತ್ರಿಕೆಗಳು | .... | ೦-೦-೩ | ,, | ೦-೦-೩ |
| ೨೧. ಕಲ್ಲಿದ್ದಲಿ | .... | ೦-೦-೩ | ,, | ೦-೦-೩ |
| ೨೨. ಬೆಂಕಿಪೆಟ್ಟಿಗೆ | .... | ೦-೦-೩ | ,, | ೦-೦-೩ |
| ೨೩. ಬೆಳ್ಳಿ—ಬಂಗಾರ | .... | ೧½% | ೧½% | ೧½% |
| ೨೪. ಬೆಳ್ಳಿ—ಬಂಗಾರ ದಾಗೀನುಗಳು (ಸಾದಾ) * | .... | ೧½% | ೦-೦-೩ | ೧½% |
| ೨೫. ಪಾನೀಯಗಳು ಮತ್ತು ಮಾದಕವಲ್ಲದ ಪೇಯಗಳು (ಸೀಲಬಂದ ಮಾಡಿದ ಪಾತ್ರಕಗಳಲ್ಲಿ ಮಾರಾಟವಾದಾಗ) * | .... | ೦-೦-೬ | ೦-೦-೬ | ೦-೦-೬ |
| ೨೬. (೧) ೨ಆಣೆಗಿಂತ ಕಡಿಮೆಯ ದರದ ಪ್ಲಾಸ್ಟಿಕ್ಕಿನ ಬಳೆ, ಬೂಚು, ಮತ್ತು ಗುಂಡಿಗಳು | | ೦-೦-೬ | ೦-೦-೬ | ೦-೦-೬ |
| (೨) ಪ್ಲಾಸ್ಟಿಕ್ಕಿನ ಇತರ ಸರಕಗಳು ೧೨ ಆಣೆಗಿಂತ ಕಡಿಮೆ ಬೆಲೆ * | | ೦-೦-೬ | ೦-೦-೬ | ೦-೦-೬ |

| | | | |
|---|---|---|---|
| ೨೭. ಸೈಕಲ್ | ೦-೦-೬ | ೦-೦-೬ | ೦-೦-೬ |
| ೨೮. ಕೇಕ, ಬಿಸ್ಕೀಟ * | ೦-೦-೬ | ೦-೦-೬ | ೦-೦-೬ |
| ೨೯. ಸಿಮೆಂಟ | ೦-೦-೬ | ೦-೦-೬ | ೦-೦-೬ |
| ೩೦. ಸಿ ರೇಟ, ಸಿಗರೇಟತಂಬಾಕ | ೦-೦-೬ | ೦-೦-೬ | ೦-೦-೬ |
| ೩೧. ಸಿ ರೆ, ಧೋತರ, ಚದ್ದರ ಮತ್ತಿತರ ಅರಿವೆ ಮಗ್ಗ ಟು ಮಧ್ಯಮ ನೂಲಿನ ಅರಿವೆ ಬಿಟ್ಟು) * | ೦-೦-೬ | ೦-೦-೬ | ೦-೦-೬ |
| ೩೨. ಸೀಲ್ ಮಾಡಿದ ಪಾತ್ರಕಗಳಲ್ಲಿ ಹಾಕಿದ ಆ ರ ತ ರಿಕೆಗಳ | ೦-೦-೬ | ೦-೦-೬ | ೦-೦-೬ |
| ೩೩. ವನಸ್ಪತಿ ತುಪ್ಪ | ೦-೦-೬ | ೦-೦-೬ | ೦-೦-೬ |
| ೩೪. ಬರ್ಫ | ೦-೦-೬ | ೦-೦-೬ | ೦-೦-೬ |
| ೩೫. ರತ್ನ, ಮುತ್ತು, ಹರಳು | ೦-೦-೬ | ೦-೦-೬ | ೦-೦-೬ |
| ೩೬. ಬಣ್ಣ ವಾರ್ನಿಸುಗಳು | ೦-೦-೬ | ೦-೦-೬ | ೦-೦-೬ |
| ೩೭. ಸಕ್ಕರೆ | ೦-೦-೬ | ೦-೦-೬ | ೦-೦-೬ |
| ೩೮. ಸಿಹಿ ತಿಂಡಿಗಳು, ಚಾಕಲೇಟುಗಳು | ೦-೦-೬ | ೦-೦-೬ | ೦-೦-೬ |
| ೩೯ ಶೃಂಗಾರ ಸಾಧನಗಳ | ೦-೦-೬ | ೦-೦-೬ | ೦-೦-೬ |
| ೪೦. ಬೆಳ್ಳಿ–ಬಂಗಾರ ಜರಿಗಳು | ೦-೦-೬ | ೦-೦-೬ | ೦-೦-೬ |
| ೪೧ ಬಂದೂಕು, ಹ ್ಯರಗಳು ಮದ್ದುಗುಂಡು | ೦-೧-೦ | ೦-೦-೬ | ೦-೧-೦ |
| ೪೨ ಗಡಿ ರಗಳು | ೦-೧-೦ | ೦-೦-೬ | ೦-೧-೦ |

| | | | | |
|---|---|---|---|---|
| ೪೩. ಕಾಜಿನ, ಚೀನೀ ಮಣ್ಣಿನ ಪಾತ್ರೆಗಳು (೧ ರೂ.ಗಿಂತ ಮೇಲಿನ ದರದವು) * | .... | ೦-೧-೦ | ೦-೦-೬ | ೧-೦-೦ |
| ೪೪. ಹಸ್ತಿದಂತದ, ಗಂಧದ, ನಕ್ಷೆಯ ಸರಕುಗಳು | .... | ೦-೧-೦ | ೦-೦-೬ | ೦-೧-೦ |
| ೪೫. ಪ್ಲಾಸ್ಟಿಕ್ಕಿನ ಇನ್ನಿತರ ಸರಕುಗಳು ಶೀಟುಗಳು * | .... | ೦-೧-೦ | ೦-೦-೬ | ೦-೧-೦ |
| ೪೬. ದೂರದರ್ಶಕ ಗ್ಲಾಸುಗಳು * | .... | ೦-೧-೦ | ೦-೦-೬ | ೦-೧-೦ |
| ೪ . ಅಂಚು, ಲೇಸು, ಹೆಣಿಕೆ ಮಿಶ್ರಿತ ಸಲಕರಣೆ * | .... | ೦-೧-೦ | ೦-೦-೬ | ೦-೧-೦ |
| ೪೮. ಸಿಗರೇಟ, ಪೆಟ್ಟಿಗೆ ಅಗ್ನಿವಾಹಕಗಳು | .... | ೦-೧-೦ | ೦-೦-೬ | ೦-೧-೦ |
| ೪೯. ಸಿಗಾರ, ಚಿರೂಟ, ಕೊಳವೆತಂಬಾಕು * | .... | ೦-೧-೦ | ೦-೦-೬ | ೦-೧-೦ |
| ೫ . ಸಿನೆಮಾ ಸಲಕರಣೆಗಳು * | .... | ೦-೧-೦ | ೦-೦-೬ | ೦-೧-೦ |
| ೫೧ ಧ್ವನಿರೇಖಾ ಯಂತ್ರ * | ... | ೦-೧-೦ | ೦-೦-೬ | ೦-೧-೦ |
| ೫೨ ಗೃಹ್ಯ ವಿದ್ಯುತ್ ಸಾಧನಗಳು | .... | ೦-೧-೦ | ೦-೦-೬ | ೦-೧-೦ |
| ೫೩. ಪಟಾಕ್ಷಿಗಳು * | ... | ೦-೧-೦ | ೦-೦-೬ | ೦-೧-೦ |
| ೫೪. ರಬ್ಬರ್ ಶೀಟುಗಳು, ಹಾಸುಗಳು * | .... | ೦-೧-೦ | ೦-೦-೬ | ೦-೧-೦ |
| ೫೫. ವಿದೇಶೀ ಮದ್ಯ * | .... | ೦-೧-೦ | ೦-೦-೬ | ೦-೧-೦ |
| ೫೬. ೩ ರೂ ಮೇಲಿನ ಪೆನ್ನುಗಳು * | .... | ೦-೧-೦ | ೦-೦-೬ | ೦-೧-೦ |
| ೫೭. ನೂರು ರೂ. ಮೇಲಿನ ಫರ್ನಿಚರ * | .... | ೦-೧-೦ | ೦-೦-೬ | ೦-೧-೦ |
| ೫೮. ತುಪ್ಪಳ, ಮಿದುಚರ್ಮದ ಸಾಧನಗಳು * | .... | ೦-೧-೦ | ೦-೦-೬ | ೦-೧-೦ |
| ೫೯. ಬೆಳ್ಳಿ—ಬಂಗಾರದ ಪುಡಿ | .... | ೦-೧-೦ | ೦-೦-೬ | ೦-೧-೦ |

| | | | | | |
|---|---|---|---|---|---|
| ೬೦. | ಗ್ರಾಮೋಫೋನ, ರೆಕಾರ್ಡುಗಳು | .... | ೦-೧-೦ | ೦-೦-೬ | ೦-೧-೦ |
| ೬೧. | (೧) ಹೊಜರಿ, ಹೆಣಿಕೆ ೩ ರೂ ಮೇಲಿನವು | | | | |
| | (೨) ತಯಾರಿ ಅರಿವೆ ಗೆರ್ಝುಟ್ ಪ್ರಸಿದ್ಧಿತ ೫ರೂ. ಮೇಲಿನ ದರದವು | | | | |
| | (೩) ಇತರ ತಯಾರಿ ಅರಿವೆ ೧೦ರೂ. ಮೇಲಿನವು | .... | ೦-೧-೦ | ೦-೦-೬ | ೦-೧-೦ |
| ೬೨. | ಕಬ್ಬಿಣ ಉಕ್ಕಿನ ಕಪಾಟು, ಅಲ್ಮಿರಾ ಫರ್ನಿಚರ | .... | ೦-೧-೦ | ೦-೦-೬ | ೦-೧-೦ |
| ೬೩. | ೫ರೂ. ಮೇಲಿನ ಡೌಲಿನ ಚೀಲಗಳು * | .... | ೦-೧-೦ | ೦-೦-೬ | ೦-೧-೦ |
| ೬೪. | (೧) ಮೋಟರ ವಾಹನಗಳು * | | | | |
| | (೨) ಮೋಟರ ತಳಯಂತ್ರ | | | | |
| | (೩) ರಬ್ಬರ ಟ್ಯೂಬ್, ಟೈರ್, ಬ್ಯಾಟರಿಗಳು | .... | ೦-೧-೦ | ೦-೦-೬ | ೦-೧-೦ |
| ೬೫. | ಸಂಗೀತ ವಾದ್ಯಗಳು | .... | ೦-೧-೦ | ೦-೦-೬ | ೦-೧-೦ |
| ೬೬. | ಸುವಾಸಿಕಗಳು (ಕೇಶ ತೈಲವನ್ನು ಬಿಟ್ಟು) | .... | ೦-೧-೦ | ೦-೦-೬ | ೦-೧-೦ |
| ೬೭. | ಛಾಯಾ ಚಿತ್ರ ಸಾಧನ * | .... | ೦-೧-೦ | ೦-೦-೬ | ೦-೧-೦ |
| ೬೮. | ಕತ್ತದ ಹಾಸು | .... | ೦-೧-೦ | ೦-೦-೬ | ೦-೧-೦ |
| ೬೯. | ರೆಫ್ರಿಜರೇಟರ್ * | .... | ೦-೧-೦ | ೦-೦-೬ | ೦-೧-೦ |
| ೭೦. | ೧೫ ರೂ. ಮೇಲಿನ ಬೂಟು-ಚಪ್ಪಲಿಗಳು | .... | ೦-೧-೦ | ೦-೦-೬ | ೦-೧-೦ |
| ೭೧. | ಧ್ವನಿವರ್ಧಕಗಳು * | .... | ೦-೧-೦ | ೦-೦-೬ | ೦-೧-೦ |
| ೭೨. | ಸ್ಟೇನ್ ಲೆಸ್ * | .... | ೦-೧-೦ | ೦-೦-೬ | ೦-೧-೦ |
| ೭೩. | ೨೫ ರೂ. ಮೇಲಿನ ಸೂಟಕೇಸ್ * | .... | ೦-೧-೦ | ೦-೦-೬ | ೦-೧-೦ |

| | | | | | |
|---|---|---|---|---|---|
| ೭೪. | ಕಟ್ಲರಿ * | .... | ೦-೧-೦ | ೦-೦-೬ | ೦-೧-೦ |
| ೭೫. | ಲೆಕ್ಕ ಬರೆಯುವ ಯಂತ್ರಗಳು * | .... | ೦-೧-೦ | ೦-೦-೬ | ೦-೧-೦ |
| ೭೬. | ಟೈಪರೈಟರ್ * | .... | ೦-೧-೦ | ೦-೦-೬ | ೦-೧-೦ |
| ೭೭. | ಸ್ಪ್ರಿಂಗಿನ ಫರ್ನಿಚರ್ | .... | ೦-೧-೦ | ೦-೦-೬ | ೦-೧-೦ |
| ೭೮. | ವಾಯರ್‌ಲೆಸ್ ಸಾಧನ, ರೇಡಿಯೋ ಗ್ರಾಮೋಫೋನ್* | .... | ೦-೧-೦ | ೦-೦-೬ | ೦-೧-೦ |
| ೭೯. | ೩ರೂ. ಮೇಲಿನ ೩ನೇ ಕಲಮಿನಲ್ಲಿ ಹೇಳಿದ ಅರಿವೆ | ... | ೦-೧-೩ | ೦-೦-೬ | ೦-೧-೩ |
| ೮೦. | ಇತರ ಯಾವದೇ ಸರಕುಗಳು | .... | ೦-೦-೩ | ೦-೦-೬ | ೦-೦-೩ |

# ಪರಿಶಿಷ್ಟ ಇ



## ಸೇಲ್ ರಜಿಸ್ಟರ

## ಸೂಚನೆಗಳು

ಮಾರಾಟದ ದಾಖಲೆಯಲ್ಲಿ ಒಟ್ಟು ೨೪ ಕಲಮುಗಳನ್ನು ತೋರಿಸಿದ್ದರೂ ಎಲ್ಲ ಕಲಮುಗಳೂ ನಿಮಗೆ ಲಾಗೂ ಆಗಲಿಕ್ಕಿಲ್ಲ. ಇದು ಎಲ್ಲ ಬಗೆಯ ವ್ಯವಹಾರಕ್ಕೂ ಮಾನ್ಯವಾಗುವಂತೆ ಬರೆಯಲಾಗಿದೆ. ಈ ರಜಿಸ್ಟರನ್ನು ತುಂಬುವದಕ್ಕೆ ಮುಖ್ಯವಾಗಿ ಪಾವತಿಗಳಲ್ಲಿ ವಿವರಗಳು ಇರಬೇಕಾಗುತ್ತವೆ. ಒಟ್ಟಿಗೆ ಹಣ ತುಂಬುವವರು ಸಾಮಾನ್ಯ ಕರದ ವ್ಯವಹಾರವನ್ನು ಬರೆಯುವ ಕಾರಣವಿಲ್ಲ.

೨— ಇದರಲ್ಲಿ ಸೇಲ್ಸಟ್ಯಾಕ್ಸ ವಸೂಲ ಆದದ್ದು, ಕಮಿಶನ್ ಕೊಟ್ಟದ್ದು ಬಿಟ್ಟು ಉಳಿದೆಲ್ಲ ವಿಕ್ರಿ ರಕಮುಗಳನ್ನು ಬರೆಯಬೇಕು.

೩, ೪— ಪರಪ್ರಾಂತಕ್ಕೆ ಕಳಿಸಿದ್ದು ಮತ್ತು ಎ ಕೋಷ್ಟಕದಲ್ಲಿ ಹೇಳಿದ ಮಾಲಿನ ವಿಕ್ರಿ.

೫,೬— ೨ ರಲ್ಲಿ ೩-೪ ರ ರಕಮನ್ನು ಕಳೆದು ಇವೆರಡರಲ್ಲಿ ಬರೆಯಬೇಕು. ೫ನೇದ್ದು ಮತ್ತು ೧೬ನೇದ ರಕಮುಗಳು ಒಂದೇ ಇರುತ್ತವೆ.

೬, ೭, ೮— ಈ ಮೂರರ ರಕಮುಗಳನ್ನು ೫ ನೇದ್ದರಲ್ಲಿ ವಜಾ ಮಾಡಬೇಕು.

೯— ಸವಲತ್ತಿನ ರೂಲ್ಸ ೫, ೭ ರಲ್ಲಿ ಹೇಳಿದ ಯಾವದಾದರೂ ಕರಮುಕ್ತ ವ್ಯಾಪಾರವಿದ್ದರೆ....

೧೦— ಮೊದಲನೇ ಕರಕ್ಕೆ ಪಾತ್ರವಿದ್ದ ನಕ್ಕಿ ವ್ಯವಹಾರವು.

೧೧, ೧೩— ಮೊದಲನೇ ಕರದಲ್ಲಿ ಒಟ್ಟಿಗೆ ೫ ನಮೂನೆಯ ದರಗಳಿವೆ. ಎಲ್ಲ ದರಗಳು ಲಾಗೂ ಇರುವದು ಸಾಧ್ಯವಲ್ಲದ್ದರಿಂದ, ಎರಡಕ್ಕೆ ಮಾತ್ರ ರಜಿಸ್ಟರಿನಲ್ಲಿ ಅವಕಾಶವನ್ನು ಕೊಟ್ಟಿದೆ.

೧೨, ೧೪— ಯಾವದನ್ನೂ ವಜಾ ಮಾಡದೇ ಆ ಆ ದರದಂತೆ ಕರಾಕರಣೆಯನ್ನು ಬರೆಯಬೇಕು.

೧೫, ೨೪— ಗಿರಾಕಿಗಳಿಂದ ಪ್ರತ್ಯೇಕವಾಗಿ ವಸೂಲ ಮಾಡಿದ ಕರಗಳನ್ನು ಕಾಣಿಸಬೇಕು. ಬಂದದ್ದೆಷ್ಟು, ಕೈಯಿಂದ ಹೋಗುವದೆಷ್ಟು ತಿಳಿಯುತ್ತದೆ.

೧೭, ೧೮— ಇದರಲ್ಲಿಯ ಕರಮುಕ್ತ ವ್ಯವಹಾರಗಳನ್ನು ೧೬ ರಲ್ಲಿ ವಜಾ ಹಾಕಬೇಕು.

೧೯— ಸಾಮಾನ್ಯ ಕರಕ್ಕೆ ಪಾತ್ರವಿದ್ದ ನಕ್ಕಿ ವ್ಯವಹಾರವು.

೨೦, ೨೨— ಮೇಲಿನಂತೆ ಇಲ್ಲಿಯೂ ಎರಡು ದರಗಳನ್ನು ಕೊಟ್ಟಿದೆ. ಅರ್ಧದರದ ವ್ಯವಹಾರವನ್ನು ಸೆಕ್ಶನ್ (B) ದಲ್ಲಿ ಹೇಳಿದೆ. ಅದನ್ನೂ ಇದರಲ್ಲಿಯೇ ತಗೊಳ್ಳಬಹುದು.

೨೧, ೨೩— ೨೦, ೨೨ ರ ಮೇಲಿನ ನಕ್ಕಿ ಕರದ ಲೆಕ್ಕ.

# ಸೇಲ್ ರಜಿಸ್ಟರ್

| ಮಾರಾಟ | | | | ಮೊದಲನೇ ಕರದ ವ್ಯವಹಾರ | | | | | | | |
|---|---|---|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ |
| ತಾರೀಖು | ಒಟ್ಟು ವಿಕ್ರಿ | ಪರ ಪ್ರಾಂತ | ಕರ ಮಾಫ | ಮೊ.ಕರ ಮಾರಾಟ | ನಂಬರದಾರ ಖರೀದಿಯು ಮಾಲಿನವಜಾ | ಖರೀದಿ ಕರ ಕೊಟ್ಟ ಮಾಲಿನವಜಾ | ಆಥರಾಯಿಜೇಶನ್ನಿನವರಿಗೆ ಮಾರಾಟ | ರೂಲಿನಲ್ಲಿಯು ಕರಮುಕ್ತ ಮಾರಾಟ | ಮೊ.ಕರಪಾತ್ರ ಮಾರಾಟ | ದರದಂತೆ ಕರಪಾತ್ರ | (೧೧)ರಮೇಲಿನ ಕರ |
| | | | | | | | | | | | |

| ಸಾಮಾನ್ಯ ಕರದ ವ್ಯವಹಾರ | | | | | | | | | | | |
|---|---|---|---|---|---|---|---|---|---|---|---|
| ೧೩ | ೧೪ | ೧೫ | ೧೬ | ೧೭ | ೧೮ | ೧೯ | ೨೦ | ೨೧ | ೨೨ | ೨೩ | ೨೪ |
| ...ದರದಂತೆ ಕರಪಾತ್ರ | (೧೩)ರ ಮೇಲಿನಕರ | ಮೊದಲನೇ ಕರದವಸೂಲಿ | ಸಾಮಾನ್ಯ ಕರದ ಮಾರಾಟ | ಲೈಸೆನ್ಸದಾರರಿಗೆ | ....ರೂಲಿನಲ್ಲಿ ಹೇಳಿದ ಕರಮುಕ್ತ | ಸಾ.ಕರಪಾತ್ರ ಮಾರಾಟ | ....ದರದಂತೆ ಕರಪಾತ್ರ ವಿದ್ದದ್ದು | (೨೦)ರ ಮೇಲಿನಕರ | ....ದರದಂತೆ ಕರಪಾತ್ರ ವಿದ್ದದ್ದು | (೨೨)ರ ಮೇಲಿನಕರ | ಸಾಮಾನ್ಯ ಕರದವಸೂಲಿ |
| | | | | | | | | | | | |

೧೧, ೧೩— ಮೊದಲನೇ ಕರದಲ್ಲಿ ಒಟ್ಟಿಗೆ ೫ ನಮೂನೆಯ ದರಗಳಿವೆ. ಎಲ್ಲ ದರಗಳು ಲಾಗೂ ಇರುವದು ಸಾಧ್ಯವಲ್ಲದ್ದರಿಂದ, ಎರಡಕ್ಕೆ ಮಾತ್ರ ರಜಿಸ್ಟರಿನಲ್ಲಿ ಅವಕಾಶವನ್ನು ಕೊಟ್ಟದೆ.

೧೨, ೧೪— ಯಾವದನ್ನೂ ವಜಾ ಮಾಡದೇ ಆ ಆ ದರದಂತೆ ಕರಾಕರಣೆಯನ್ನು ಬರೆಯಬೇಕು.

೧೫, ೨೪— ಗಿರಾಕಿಗಳಿಂದ ಪ್ರತ್ಯೇಕವಾಗಿ ವಸೂಲ ಮಾಡಿದ ಕರಗಳನ್ನು ಕಾಣಿಸಬೇಕು. ಬಂದದ್ದೆಷ್ಟು, ಕೈಯಿಂದ ಹೋಗುವದೆಷ್ಟು ತಿಳಿಯುತ್ತದೆ.

೧೭, ೧೮— ಇದರಲ್ಲಿಯ ಕರಮುಕ್ತ ವ್ಯವಹಾರಗಳನ್ನು ೧೬ ರಲ್ಲಿ ವಜಾ ಹಾಕಬೇಕು.

೧೯— ಸಾಮಾನ್ಯ ಕರಕ್ಕೆ ಪಾತ್ರವಿದ್ದ ನಕ್ಕಿ ವ್ಯವಹಾರವು.

೨೦, ೨೨— ಮೇಲಿನಂತೆ ಇಲ್ಲಿಯೂ ಎರಡು ದರಗಳನ್ನು ಕೊಟ್ಟದೆ. ಅರ್ಧದರದ ವ್ಯವಹಾರವನ್ನು ಸೆಕ್ಶನ್ (B) ದಲ್ಲಿ ಹೇಳಿದೆ. ಅದನ್ನೂ ಇದರಲ್ಲಿಯೇ ತಗೊಳ್ಳಬಹುದು.

೨೧, ೨೩— ೨೦, ೨೨ ರ ಮೇಲಿನ ನಕ್ಕಿ ಕರದ ಲೆಕ್ಕ.

# ಸೇಲ್ ರಜಿಸ್ಟರ್

| ಮಾರಾಟ | | | | ಮೊದಲನೇ ಕರದ ವ್ಯವಹಾರ | | | | | | | |
|---|---|---|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ |
| ತಾರೀಖು | ಒಟ್ಟು ವಿಕ್ರಿ | ಪರ ಪ್ರಾಂತ | ಕರ ಮಾಫ | ಮೊ.ಕರ ಮಾರಾಟ | ನಂಬರದಾರ ಖರೀದಿಯ ಮಾಲಿನವಜಾ | ಖರೀದಿ ಕರ ಕೊಟ್ಟ ಮಾಲಿನವಜಾ | ಅಥರಾಯಿಜೀ ಶನ್ನಿನವರಿಗೆ ಮಾರಾಟ | ರೂಲಿನಲ್ಲಿಯ ಕರಮುಕ್ತ ಮಾರಾಟ | ಮೊ. ಕ: ಪಾತ್ರ ಮಾರಾಟ | ದರದಂತೆ ಕರಪಾತ್ರ | (೧೧)ರಮೇಲಿನ ಕರ |
| | | | | | | | | | | | |

## ೨ ನ ಕರದ ವ್ಯವಹಾರ

| ೧೩ | ೧೪ | ೧೫ | ೧೬ | ೧೭ | ೧೮ | ೧೯ | ೨೦ | ೨೧ | ೨೨ | ೨೩ | ೨೪ |
|---|---|---|---|---|---|---|---|---|---|---|---|
| ...ದರದಂತೆ ಕರಪಾತ್ರ | (೧೩)ರ ಮೇಲಿನಕರ | ಮೊದಲನೇ ಕರದವಸೂಲಿ | ಸಾಮಾನ್ಯ ಕರದ ಮಾರಾಟ | ಲೈಸೆನ್ಸದಾರರಿಗೆ | ....ರೂಲಿನಲ್ಲಿ ಹೇಳಿದ ಕರಮುಕ್ತ | ಸಾ.ಕರಪಾತ್ರ ಮಾರಾಟ | ....ದರದಂತೆ ಕರಪಾತ್ರ ವಿದ್ದದ್ದು | (೨೦)ರ ಮೇಲಿನಕರ | ....ದರದಂತೆ ಕರಪಾತ್ರ ವಿದ್ದದ್ದು | (೨೨)ರ ಮೇಲಿನಕರ | ಸಾಮಾನ್ಯ ಕರದವಸೂಲಿ |
| | | | | | | | | | | | |

## ಪರಿಶಿಷ್ಟ ೪

# ಖರೀದಿಯ ರಜಿಸ್ಟರ್

### ಖರೀದಿಯ ವಿವರಗಳು.

| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ |
|---|---|---|---|---|---|---|---|---|---|---|---|
| ತಾರೀಖು | ಬಿಲ್ ನಂ. | ಯಾರಿಂದ | ಊರು | ನೋಂದಣಿ ನಂ | ... ದರದ ಖರೀದಿ | ... ದರದ ರಕಮು | . ದರದ ಖರೀದಿ | ....ದರದ ರಕಮು | ಕೊಟ್ಟ ಮೊದಲನೇ ಕರ | ಕೊಟ್ಟ ಸಾಮಾನ್ಯ ಕರ | ಷರಾ |
| | | | | | | | | | | | |

### ಖರದಿ ಕರದ ತಪಶೀಲು

| ೧ | ೨ | ೩ | ೪ | ೫ | ೬ | ೭ | ೮ | ೯ |
|---|---|---|---|---|---|---|---|---|
| ತಾರೀಖು | ಒಟ್ಟು ಖರೀದಿ | ಕರಮಾಫ ಖರೀದಿ | ನಂಬರದಾರ ಖರೀದಿ | ನಕ್ಕಿ ಕರಪಾತ್ರ ಖರೀದಿ | ... ದರದಂತೆ ಖರೀದಿ | ೬ರ ಮೇಲಿ ಖರೀದಿ ಕರ | .. ದರದಂತೆ ಖರೀದಿ | ೮ರ ಮೇಲಿ ಖರೀದಿಕರ |
| | | | | | | | | |

# ಪರಿಶಿಷ್ಟ ೫

## ಸರ್ಟಿಫಿಕೇಟುಗಳ ನಮೂನೆಗಳು

### ಜೆ ಸರ್ಟಿಫಿಕೇಟು

ಅಥರಾಯಿಜೇಶನ್ನಿನವರು ತಮ್ಮ ಖರೀದಿಯ ಕಾಲಕ್ಕೆ ಕೊಡಬೇಕಾದ ಸರ್ಟಿಫಿಕೇಟು

ಮೆಸರ್ಸ......................................ನೋಂದಣಿ ನಂ............ ತಾ ............ಮತ್ತು ಆಥರಾಯಿಜೇಶನ್ ನಂ......... ತಾ.............ಧಾರಣಮಾಡುವ ನಾವು ದಾಖಲೆ ಕೊಡುವದೇನಂದರೆ ಮೆಸರ್ಸ............... ...............ಇವರ ಕಡೆಯಿಂದ ತಾ.............. ಬಿಲ್ ನಂ............ ಇದರಲ್ಲಿ ಕಾಣಿಸಿದ ಸರಕುಗಳನ್ನು ನಾವು ಇಲ್ಲವೆ ನಾವು ಮಾರಾಟ ಮಾಡುವ ನಂಬರದಾರರ ಮುಖಾಂತರ ಪರಪ್ರಾಂತಕ್ಕೆ ಕಳಿಸುವದಕ್ಕೆಂದು ಖರೀದಿ ಮಾಡಿರುತ್ತೇವೆ.

ಊರು ಸಹಿ....

ತಾರೀಖು ದರ್ಜೆ

### ಕೆ ಸರ್ಟಿಫಿಕೇಟು

ಪುನರ್ಮಾರಾಟದ ಲೈಸೆನ್ಸದಾರರು ತಮ್ಮ ಖರೀದಿಯ ಕಾಲಕ್ಕೆ ಕೊಡಬೇಕಾದ ಸರ್ಟಿಫಿಕೇಟು.

ಮೆಸರ್ಸ...................................... ನೋಂದಣಿ ನಂ. ............ ತಾ............ ಮತ್ತು ಲೈಸೆನ್ಸ ನಂ............. ತಾ............ ಧಾರಣ ಮಾಡುವ ನಾವು ದಾಖಲೆ ಕೊಡುವದೇನಂದರೆ ಮೆಸರ್ಸ................... ............ಇವರ ಕಡೆಯಿಂದ ತಾ. ಬಿಲ್ ನಂ. ಇದರಲ್ಲಿ ಕಾಣಿಸಿದ ಸರಕುಗಳನ್ನು ಪುನಃ ಮಾರಾಟ ಮಾಡುವದಕ್ಕೆಂದು ಖರಿದಿ ಮಾಡಿರುತ್ತೇವೆ.

ಊರು ಸಹಿ

ತಾ. ದರ್ಜೆ

## ೨ನೇ ಫಾರ್ಮು

ಪರಪ್ರಾಂತದಲ್ಲಿರುವ ನಂಬರದಾರನಿಂದ ಖರೀದಿ ಮಾಡಿದವರು ಕೊಡಬೇಕಾದ ಸರ್ಟಿಫಿಕೇಟು.

ಮೆಸರ್ಸ........................... ನೋಂದಣಿ ನಂ........ ........

ತಾ.............ಧಾರಣ ಮಾಡುವ ನಾವು ದಾಖಲೆ ಕೊಡುವದೇನೆಂದರೆ

ಮೆಸರ್ಸ.................ಇವರ ತಾ...............ದ್ದರ ಬಿಲ್ ನಂ...........

ಇದರಲ್ಲಿ ಕಾಣಿಸಿದ ಸರಕುಗಳನ್ನು ಪುನರ್ಮಾರಾಟಕ್ಕಾಗಿ ಖರೀದಿ ಮಾಡಿರುತ್ತೇವೆ.

ಸಹಿ

ಊರು

ದರ್ಜೆ

ತಾ.

## ೪ನೇ ಫಾರ್ಮು

ಸವಲತ್ತಿನ ರೂಲ್ ೬ (೪) ರನ್ವಯ, ಖರೀದಿದಾರನು ಕೊಡಬೇಕಾದ ಸರ್ಟಿಫಿಕೇಟು.

ಮೆಸರ್ಸ..................... ನೋಂದಣಿ ನಂ...................

ತಾ.................. ಧಾರಣ ಮಾಡುವ ನಾನು ಬರಕೊಡುವದೇನಂದರೆ,

ಮೆಸರ್ಸ...................... ಇವರ ಕಡೆಯಿಂದ, ತಾ.......................

ಬಿಲ್ ನಂ............ಇದರಲ್ಲಿ ಕಾಣಿಸಿದ ಸರಕನ್ನು, ಕೆಳಗೆ ತೋರಿಸಿದ ಸರಕುಗಳನ್ನು ಉತ್ಪಾದಿಸುವದಕ್ಕಾಗಿ ಖರೀದಿ ಮಾಡಿದ್ದೇನೆ.

— ಜಿನ್ ಅಥವಾ ಪ್ರೆಸ್ ಮಾಡಿದ ಹತ್ತಿ, ಹತ್ತಿಕಾಳು.

— ಶೇಂಗಾ ಕಾಳು.

—ಸ್ವಚ್ಛಮಾಡಿದ ಉಣ್ಣೆ, ರೇಶಿಮೆ ಅಥವಾ ಉಣ್ಣೆಯ ನೂಲು, ಬ್ಲೀಚ ಮಾಡಿದ, ಬಣ್ಣ ಹಾಕಿದ, ಹಿಂಜಿದ, ಪ್ರೊಸೆಸ್ ಮಾಡಿದ ನೂಲು.

ಸಹಿ

ಊರು

ದರ್ಜೆ

ತಾ.



## ಸೂಚನೆಗಳು.



೨--ಇಡೀ ದಿನದ ಖರೀದಿಯನ್ನು ಬರೆಯಬೇಕು.

೩— ಎ ಕೋಷ್ಟಕದ ಕರಮಾಫ ಖರೀದಿ.

೪— ನಂಬರದಾರ್ರಿಂದ ತಂದ ಖರೀದಿಯು.

೫— ೩, ೪ ರ ಅಂಕಿಗಳನ್ನು ೨ರಲ್ಲಿ ಕಳೆಯಬೇಕು.

೬.೮— ಐದಾರು ನಮೂನೆಯ ದರಗಳಿರುವದರಿಂದ, ಎರಡನ್ನು ಮಾತ್ರ ಈ ರಜಿಸ್ಟರಿನಲ್ಲಿ ಕಾಣಿಸಲಾಗಿದೆ.

